ವೇದಾಂತಭಾರತೀ ಗ್ರಂಥಮಾಲಾ-ತ್ರಯೋವಿಂಶಂ ಪುಷ್ಪಮ್

# ತೈತ್ತಿರೀಯೋಪನಿಷತ್ ಪ್ರವಚನ

## ಶೀಕ್ಷಾ-ಬ್ರಹ್ಮ-ಭೃಗುವಲ್ಲಿಗಳು

ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥಶರ್ಮಾ





ವೇದಾಂತಭಾರತೀ
(ವೇದ-ವೇದಾಂತ ಅಧ್ಯಯನ ಮತ್ತು ಸಂಶೋಧನ ಸಂಸ್ಥೆ)
ಚಂದ್ರಮೌಳಿ ರಸ್ತೆ, ಕೃಷ್ಣರಾಜನಗರ-571602 ಮೈಸೂರು ಜಿಲ್ಲೆ.

॥ ಜ್ಞಾನಾದೇವ ತು ಕೈವಲ್ಯಮ್ ॥

ವೇದಾಂತಭಾರತೀ ಗ್ರಂಥಮಾಲಾ–ತ್ರಯೋವಿಂಶಂ ಪುಷ್ಪಮ್

# ತೈತ್ತಿರೀಯೋಪನಿಷತ್ ಪ್ರವಚನ

## ಶೀಕ್ಷಾ–ಬ್ರಹ್ಮ–ಭೃಗುವಲ್ಲಿಗಳು

ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥಶರ್ಮಾ




**ವೇದಾಂತಭಾರತೀ**

(ವೇದ–ವೇದಾಂತ ಅಧ್ಯಯನ ಮತ್ತು ಸಂಶೋಧನ ಸಂಸ್ಥೆ)

ಚಂದ್ರಮೌಳಿ ರಸ್ತೆ, ಕೃಷ್ಣರಾಜನಗರ–571602

ಮೈಸೂರು ಜಿಲ್ಲೆ. ದೂರವಾಣಿ : 08223–262471

# Taittiriyopanishat Pravachana-
Sheeksha-Brahma-Bruguvalli - With Kannada Translation
by Mahamahopadhyaya Vidwan N. Ranganatha Sharma

FIRST PRINT : 2007

COPIES : 1000



PAGES : 126

PRICE : Rs. 50/-

**PUBLISHED BY :**

**Vedanta Bharati**
(Academy of Veda - Vedanta Studies and Research)
Chandramouli Road, Krishnarajanagara - 571 602,
Mysore District. ✆ : 08223-262471

PRINTED AT :

**Span Print**
Banashankari 2nd Stage, Bangalore- 70
Phone : 26718831



# श्री श्री जगद्गुरु शङ्कराचार्य महासंस्थानम्
# दक्षिणाम्नाय श्री शारदापीठम्, शृङ्गेरी.

SRI SRI JAGADGURU SHANKARACHARYA MAHASAMSTHANAM
DAKSHINAMNAYA SRI SHARADA PEETHAM, SRINGERI - 577 139

---

Ref : Camp · ಬೆಂಗಳೂರು Date : 10.4.2007

ಶ್ರೀಮಚ್ಛಂಕರಭಗವತ್ಪಾದ ವಿರಚಿತ ತೈತ್ತಿರೀಯೋಪನಿಷದ್ಭಾಷ್ಯಸಾರವನ್ನು ತತ್ತ್ವಜಿಜ್ಞಾಸುಗಳಿಗೆ ತಿಳಿಸಲು ವೇ॥ಬ್ರ॥ಶ್ರೀ ರಂಗನಾಥಶರ್ಮರ 'ತೈತ್ತಿರೀಯೋಪನಿತ್ ಪ್ರವಚನ'ವೆಂಬ ಗ್ರಂಥವನ್ನು ವೇದಾಂತಭಾರತಿಯು ಪ್ರಕಟಿಸುತ್ತಿರುವುದು ಪ್ರಶಂಸನೀಯವಾಗಿದೆ.

ತೈತ್ತಿರೀಯೋಪನಿಷತ್ತಿನಲ್ಲಿ ಹಲವು ಉಪಾಸನೆಗಳು ಹೇಳಲ್ಪಟ್ಟಿವೆ. ಗುರುವಿನಿಂದ ಶಿಷ್ಯನಿಗೆ ಧರ್ಮೋಪದೇಶವು ಈ ಉಪನಿಷತ್ತಿನಲ್ಲಿ ಹೇಳಿದಷ್ಟು ವಿಶದವಾಗಿ ಮತ್ತು ಸರಳವಾಗಿ ಬೇರೆಲ್ಲೂ ಹೇಳಿರುವುದಿಲ್ಲ. ನಿರ್ಗುಣಪರಬ್ರಹ್ಮ ತತ್ತ್ವಪ್ರತಿಪಾದನೆಯು ಇಲ್ಲಿ ಬಹಳ ರಮಣೀಯವಾಗಿದೆ. ಹೀಗೆ ವಿಷಯವೈವಿಧ್ಯದಿಂದ ಕೂಡಿದ ಈ ಉಪನಿಷತ್ತಿಗೆ ಭಗವತ್ಪಾದರ ಭಾಷ್ಯವು ಪ್ರಸನ್ನಗಂಭೀರವೂ, ಸಕಲ ಸಂಶಯನಿವಾರಕವೂ ಆಗಿದೆ.

ಇಂತಹ ಅತ್ಯುತ್ತಮವಾದ ಗ್ರಂಥವನ್ನು ತತ್ತ್ವಜಿಜ್ಞಾಸುಗಳು ಚೆನ್ನಾಗಿ ಮನನಮಾಡಿ ಶ್ರೇಯೋಭಾಜನರಾಗಲೆಂದು ಶ್ರೀಶ್ರೀ ಜಗದ್ಗುರು ಮಹಾಸ್ವಾಮಿಗಳು ಆಶೀರ್ವದಿಸಿದ್ದಾರೆ.

ಇಂತು.

॥ ಶ್ರೀ ಚತುರ್ಭುಜ ಪಟ್ಟಾಭಿರಾಮೋ ವಿಜಯತೇ ॥





# ಯಡತೊರೆ ಶ್ರೀ ಯೋಗಾನಂದೇಶ್ವರ ಸರಸ್ವತೀ ಮಠ

ಚಂದ್ರಮೌಳಿ ರಸ್ತೆ, ಕೃಷ್ಣರಾಜನಗರ-571 602 ಮೈಸೂರು ಜಿಲ್ಲೆ

---

ಮೊಕ್ಕಾಂ : ಮೈಸೂರು

ಶಿಕ್ಷಾ, ಆನಂದ, ಭೃಗು ಎಂಬ ಮೂರು ವಲ್ಲಿಗಳಿಂದ ಕೂಡಿದ ತೈತ್ತಿರೀಯೋಪನಿಷತ್ತು ಉಪನಿಷತ್ತುಗಳಲ್ಲಿಯೇ ಅತ್ಯಂತ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಅನೇಕ ಉಪಾಸನೆಗಳನ್ನು ತಿಳಿಸುವ ಈ ಉಪನಿಷತ್ತು ಆನಂದಮೀಮಾಂಸೆಯನ್ನು ಮಾಡಿ ಕೊನೆಗೆ ಏಕತ್ತ್ವವನ್ನು ನೋಡಿದ ಜ್ಞಾನಿಯ ಸ್ಥಿತಿಯನ್ನು ತಿಳಿಸುವ ರೀತಿ ಅನ್ಯಾದೃಶವಾದುದು. ಇದಕ್ಕೆ ಇರುವ ಶ್ರೀಶಂಕರಭಗವತ್ಪಾದರ ಭಾಷ್ಯವು ಅಷ್ಟೇ ಗಂಭೀರವಾಗಿ ರಮಣೀಯವಾಗಿ ಉಪನಿಷತ್ತಿನ ಅರ್ಥವನ್ನು ತಿಳಿಸಿಕೊಡುತ್ತದೆ. ಇಲ್ಲಿ ಭಾಷ್ಯಕಾರರು ಸತ್ಯ, ಜ್ಞಾನ, ಅನಂತವೆಂಬ ಪದಗಳಿಗೆ ನೀಡಿದ ವಿವರಣೆಯನ್ನು ಇನ್ನೊಂದು ಕಡೆ ನಾವು ನೋಡುವುದಕ್ಕೆ ಸಾಧ್ಯವಿಲ್ಲ. ಹಾಗೆಯೇ ಉಪನಿಷತ್ತಿನಲ್ಲಿ ಬರುವ 'ಸಂಕ್ರಮಣ' ಶಬ್ದವನ್ನು ವಿಸ್ತಾರವಾಗಿ ಚರ್ಚಿಸಿ ಅರ್ಥವನ್ನು ನೀಡಿದ್ದಾರೆ. ಇಂತಹ ಅನೇಕ ವಿಷಯಗಳನ್ನೊಳಗೊಂಡಿರುವ ಈ ಉಪನಿಷತ್ತು ಹಾಗೂ ಭಾಷ್ಯದ ಸಾರಾಂಶವನ್ನು ಕನ್ನಡಜನತೆಗೆ ಸುಲಭವಾಗಿ ತಿಳಿಯುವಂತೆ ಮಾಡಲು ಖ್ಯಾತ ವಿದ್ವಾಂಸರಾದ ಶ್ರೀಮಾನ್ ಎನ್. ರಂಗನಾಥ ಶರ್ಮರು ತೈತ್ತಿರೀಯೋಪನಿತ್ ಪ್ರವಚನವೆಂಬ ಗ್ರಂಥವನ್ನು ರಚಿಸಿರುತ್ತಾರೆ. ಇದನ್ನು ವೇದಾಂತಭಾರತಿಯು ಪ್ರಕಟಿಸುತ್ತಿರುವುದು ನಮಗೆ ಅತ್ಯಂತ ಸಂತೋಷವನ್ನು ಉಂಟುಮಾಡಿದೆ. ಈ ಪುಸ್ತಕವನ್ನು ಆಸ್ತಿಕ ಜನತೆ ಓದಿ ಉಪನಿಷತ್ತು ಹಾಗೂ ಭಗವತ್ಪಾದರ ಪರಿಚಯವನ್ನು ಮಾಡಿಕೊಳ್ಳಲಿ ಎಂದು ಆಶಿಸುತ್ತೇವೆ. ಇದಕ್ಕಾಗಿ ಪರಿಶ್ರಮವನ್ನು ವಹಿಸಿದ ಎಲ್ಲರಿಗೂ ನಮ್ಮ ಆರಾಧ್ಯಮೂರ್ತಿ ಪರಿಪೂರ್ಣ ಅನುಗ್ರಹವನ್ನು ಮಾಡಲಿ ಎಂದು ಪ್ರಾರ್ಥಿಸುತ್ತೇವೆ.



ಸರ್ವಜಿನ್ನಾಮ ಸಂವತ್ಸರದ
ಚೈತ್ರ ಬಹುಳ ದ್ವಾದಶೀ ಸ್ಥಿರವಾಸರಃ
ದಿನಾಂಕ : 14-4-2007

ಇತಿ ನಾರಾಯಣಸ್ಮರಣಮ್

# ಪ್ರಸ್ತಾವನೆ

ವೇದದಲ್ಲಿ ಕರ್ಮಕಾಂಡ ಜ್ಞಾನಕಾಂಡ ಎಂದು ಎರಡು ವಿಭಾಗಗಳುಂಟಷ್ಟೆ. ಇವುಗಳಲ್ಲಿ ಕರ್ಮಕಾಂಡವು ಧರ್ಮ-ಅರ್ಥ-ಕಾಮಗಳೆಂಬ ಮೊದಲನೆಯ ಮೂರು ಪುರುಷಾರ್ಥಗಳ ಸ್ವರೂಪವನ್ನು ಅವುಗಳ ಸಾಧನಮಾರ್ಗವನ್ನು ತಿಳಿಸಿಕೊಡುತ್ತದೆ. ಮಾನವನಿಗೆ ಸಹಜವಾಗಿ ಅರ್ಥ ಕಾಮಗಳ ಬಯಕೆ ಇರುತ್ತದೆ. ಅವೆರಡನ್ನು ಧರ್ಮಮಾರ್ಗದಿಂದಲೇ ಸಂಪಾದಿಸಿ ಅನುಭವಿಸಬೇಕೆಂದೂ ಆಗಲೇ ಆತನಿಗೆ ಅಭ್ಯುದಯನಿಃಶ್ರೇಯಸಗಳ ಪ್ರಾಪ್ತಿಯೆಂದೂ ತಿಳಿಸುವುದಕ್ಕಾಗಿ ಇಲ್ಲಿ ಧರ್ಮದ ಪ್ರವೇಶವಾಗಿದೆ. ಧರ್ಮದ ಸ್ವರೂಪವನ್ನು ಧರ್ಮಶಾಸ್ತ್ರವು ವಿಸ್ತಾರವಾಗಿ ನಿರೂಪಿಸುತ್ತದೆ. ಸಮಂಜಸವಾದ ರೀತಿಯಲ್ಲಿ ಅರ್ಥಕಾಮಗಳ ಭೋಗವೇ ಅಭ್ಯುದಯ. ವಿವೇಕಿಯಾದವನಿಗೆ ಈ ವಿಷಯಭೋಗವು ನಿಃಸಾರವೆಂದೂ ಶಾಶ್ವತವಲ್ಲವೆಂದೂ ಗೊತ್ತಾಗಿ, ಸಮಸ್ತಸುಖಗಳ ಸಾರವೂ ಶಾಶ್ವತವೂ ಆದ ನಿಃಶ್ರೇಯಸದ (ಮೋಕ್ಷದ) ಕಡೆಗೆ ಪ್ರವೃತ್ತನಾಗುತ್ತಾನೆ.

ಕರ್ಮಮಾರ್ಗವು ಮೋಕ್ಷಕ್ಕೆ ವಿರುದ್ಧವೇನೂ ಅಲ್ಲ. ಫಲಾಪೇಕ್ಷೆಯನ್ನು ತ್ಯಜಿಸಿ ಮಾಡುವ ನಿಷ್ಕಾಮಕರ್ಮವು ಚಿತ್ತಶುದ್ಧಿಯನ್ನುಂಟುಮಾಡುತ್ತದೆ. ಲೋಕಕ್ಕೆ ಸನ್ಮಾರ್ಗದರ್ಶನವೂ ದೊರೆಯುತ್ತದೆ. ಇದನ್ನೇ ಲೋಕಸಂಗ್ರಹವೆನ್ನುತ್ತಾರೆ. ಇಂತಹ ನಿಷ್ಕಾಮಕರ್ಮವು ಚಿತ್ತಶುದ್ಧಿದ್ವಾರಾ ಮೋಕ್ಷಮಾರ್ಗಕ್ಕೆ ಸಾಧನವಾಗುತ್ತದೆಯೆಂದು ಭಗವದ್ಗೀತೆಯೇ ಮೊದಲಾದ ಗ್ರಂಥಗಳು ಘೋಷಿಸುತ್ತವೆ. ಇನ್ನು ಜ್ಞಾನಕಾಂಡವು ಆತ್ಮಜ್ಞಾನವನ್ನೂ ಮೋಕ್ಷವನ್ನೂ ನಿರೂಪಿಸುತ್ತದೆ ಎಂಬುದು ಸ್ಫುಟವಾಗಿದೆ. ಏವಂಚ ಕರ್ಮಕಾಂಡವು ಸಾಧನಮಾರ್ಗವನ್ನು ಜ್ಞಾನಕಾಂಡವು ಸಾಧ್ಯದ ಸ್ವರೂಪವನ್ನು ತಿಳಿಸುತ್ತದೆ. ಕರ್ಮಕಾಂಡ ಜ್ಞಾನಕಾಂಡಗಳಿಗೆ ಸಾಧ್ಯಸಾಧನಭಾವವೆಂಬ ಸಂಬಂಧವಿದೆ. ತೈತ್ತಿರೀಯೋಪನಿಷತ್ತಿನ ಶೀಕ್ಷಾವಲ್ಲಿಯು ಇವೆರಡು ಕಾಂಡಗಳನ್ನು ಸೇರಿಸುವ ಕೊಂಡಿಯಾಗಿರುತ್ತದೆ.

ವೇದಾಧ್ಯಯನವನ್ನು ಮುಗಿಸಿ ಗುರುಕುಲದಿಂದ ಮನೆಗೆ ತೆರಳಲಿರುವ ಶಿಷ್ಯರಿಗೆ ಆಚಾರ್ಯನು ಮಾಡುವ ಹಿತೋಪದೇಶವು ಈ ಶೀಕ್ಷಾವಲ್ಲಿಯಲ್ಲಿ ಬಂದಿದೆ. ವೇದ ಮತ್ತು ಶಾಸ್ತ್ರಗಳ ಅಧ್ಯಯನದಲ್ಲಿ ಒಂದು ವಿಶೇಷ ಉಂಟು. ಶಾಸ್ತ್ರದಲ್ಲಿ ಅರ್ಥವು ಪ್ರಧಾನ, ಶಬ್ದವು ಗೌಣ. ಶಬ್ದಗಳನ್ನೂ ಶಬ್ದಗಳ ಆನುಪೂರ್ವಿಯನ್ನೂ

ಬದಲಾಯಿಸಬಹುದು. ಶಾಸ್ತ್ರಾರ್ಥವನ್ನು ಯಾವ ಭಾಷೆಯಲ್ಲಾದರೂ ವಿವರಿಸಬಹುದು. ಆದರೆ ವೇದದಲ್ಲಿ ಹಾಗಲ್ಲ. ಶಬ್ದಾರ್ಥಗಳೆರಡೂ ಪ್ರಧಾನವಾದವು. ಶಬ್ದವನ್ನು ಬದಲಿಸುವಂತಿಲ್ಲ. 'ಅಗ್ನಿಮೀಳೇ ಪುರೋಹಿತಂ' ಎಂಬುದನ್ನು 'ವಹ್ನಿಮೀಳೇ ಪುರೋಹಿತಂ' ಎಂದೋ 'ಅಗ್ನಿಂ ಪುರೋಹಿತಮೀಳೇ' ಎಂದೋ ಹೇಳಲಾಗದು. ಅನ್ಯಭಾಷೆಯಲ್ಲಿ ಹೇಳಿದರೆ ಅದು ವೇದವೆನಿಸುವುದೇ ಇಲ್ಲ. ವೇದದ ಅರ್ಥವನ್ನರಿಯದೆ ಕೇವಲ ಶಬ್ದಾತ್ಮಕವೇದವನ್ನು ಅಭ್ಯಾಸಮಾಡಿರುವ ವೈದಿಕರೂ ಘನಪಾಠಿಗಳೂ ಇದ್ದಾರೆ. ವೈದಿಕಕರ್ಮಗಳಿಗೆ ಅಷ್ಟೇ ಸಾಕಾಗುತ್ತದೆ. ಇನ್ನು ಜ್ಞಾನಸಂಪಾದನೆಗಾಗಿ ವೇದಾರ್ಥವನ್ನರಿಯುವುದು ಆವಶ್ಯಕವೆನ್ನುವುದು ಬೇರೆಯ ಮಾತು. ವೇದಪಾರಾಯಣವು ಪವಿತ್ರವೆಂದೂ ಗೃಹದಲ್ಲಿ ವೇದಧ್ವನಿಯಾಗುವುದು ಪಾವನವೆಂದೂ ಹೇಳಲಾಗಿದೆ.

ವೇದದ ಪ್ರತಿಯೊಂದು ಶಬ್ದವನ್ನೂ ಅಕ್ಷರವನ್ನೂ ಸ್ಪಷ್ಟವಾಗಿ ಉದಾತ್ತಾದಿಸ್ವರಸಹಿತವಾಗಿ ಉಚ್ಚರಿಸಬೇಕಾಗುತ್ತದೆ. ಯಾವ ಅಕ್ಷರವನ್ನು ಹೇಗೆ ಉಚ್ಚರಿಸಬೇಕೆಂಬುದನ್ನು ವೇದಾಂಗವಾದ ಶಿಕ್ಷಾಶಾಸ್ತ್ರವು ತಿಳಿಸಿಕೊಡುತ್ತದೆ. ಈ ಶಿಕ್ಷಾಶಾಸ್ತ್ರವನ್ನು ಸರಿಯಾಗಿ ಅಭ್ಯಾಸಮಾಡಿ ವಾಗುಚ್ಚಾರಣವಿಧಿಯನ್ನು ತಿಳಿದುಕೊಳ್ಳಬೇಕೆಂದು ಸೂಚಿಸುವುದಕ್ಕಾಗಿ 'ಅಥ ಶೀಕ್ಷಾಂ ವ್ಯಾಖ್ಯಾಸ್ಯಾಮಃ' ಎಂದು ಈ ಉಪನಿಷತ್ತು ಆರಂಭದಲ್ಲಿಯೇ ಹೇಳುತ್ತದೆ. ವೇದಾಧ್ಯಯನ ಮಾಡುವಾಗ ಆಚಾರ್ಯನು ಶಿಷ್ಯನಿಗೆ ಸರಿಯಾದ ಉಚ್ಚಾರಣೆಯನ್ನೇನೋ ಕಲಿಸಿರುತ್ತಾನೆ. ಆದರೆ ಅಷ್ಟೇ ಸಾಲದು. ಪ್ರತಿಯೊಂದು ಅಕ್ಷರದ ಸ್ಥಾನ–ಪ್ರಯತ್ನಾದಿಗಳನ್ನೂ ಉದಾತ್ತಾದಿ ಸ್ವರದ ಮಹತ್ತ್ವವನ್ನೂ ಶಾಸ್ತ್ರಪೂರ್ವಕವಾಗಿ ಕಲಿತುಕೊಳ್ಳಬೇಕಾದ ಆವಶ್ಯಕತೆ ಇರುತ್ತದೆ.

ಶಿಕ್ಷಾಶಬ್ದಕ್ಕೆ ನಡೆನುಡಿಗಳ ಶಿಕ್ಷಣವೆಂಬ ಇನ್ನೊಂದು ಅರ್ಥವನ್ನು ಇಲ್ಲಿ ಹೇಳಬಹುದಾಗಿದೆ. ಮುಂದೆ ಲೋಕವ್ಯವಹಾರದಲ್ಲಿ ತೊಡಗಬೇಕಾದ ಶಿಷ್ಯರಿಗೆ ಆಚಾರ್ಯನು ಬೋಧಿಸಬೇಕಾದ ನೀತಿಪಾಠ ಇಲ್ಲಿದೆ. 'ಸತ್ಯಂ ವದ, ಧರ್ಮಂ ಚರ' ಎಂಬ ಪ್ರಸಿದ್ಧವಾದ ಎರಡು ವಾಕ್ಯಗಳು ಆರಂಭದಲ್ಲಿ ಬಂದಿವೆ. 'ಧರ್ಮಂ ಚರ' ಎಂಬ ನುಡಿ ಸೆಕ್ಯುಲರ್ ರಾಜಕಾರಣಿಗಳ ಕಿವಿಗೆ ಗಡಚಾಗಬಹುದು. ಗುರುಕುಲದಿಂದ ಹಿಂದಿರುಗಿದ ಶಿಷ್ಯನು ಮದುವೆ ಮಾಡಿಕೊಳ್ಳಬೇಕೆಂದೂ ಪ್ರಜಾಸಂತತಿಯನ್ನು ಬೆಳೆಸಬೇಕೆಂದೂ ಇಲ್ಲಿ ಉಪದೇಶವಿದೆ. ಇದು ಗಮನಿಸಬೇಕಾದ ಅಂಶ. ಗೃಹಸ್ಥನಾಗಿ ಲೋಕವ್ಯವಹಾರದಲ್ಲಿ ತೊಡಗಬೇಕೆಂದು ಸ್ಪಷ್ಟವಾದ ನಿರ್ದೇಶನವಿದೆ. ಪ್ರಕೃತಿ ಸಹಜವಾದ ಲೋಕಪ್ರವೃತ್ತಿ ಇದು. ವೈರಾಗ್ಯವು

ಒತ್ತಾಯದಿಂದ ಬರತಕ್ಕದ್ದಲ್ಲ. ಸಂಸಾರದ ಕಾವು ನೋವುಗಳಲ್ಲಿ ಬೆಂದು ಬಳಲಿದಾಗ ಸಹಜವಾಗಿಯೇ ಹುಟ್ಟುವ ನಿರ್ವೇದ ಅದು. ಆಗ ಅದು ಗಟ್ಟಿಯಾಗಿ ನಿಲ್ಲುತ್ತದೆ. ಉಪನಿಷತ್ತುಗಳ ಬೋಧೆ ಹೃದಯಕ್ಕೆ ಇಳಿಯುತ್ತದೆ. ಹಾಗಲ್ಲದೆ ಯಶಸ್ಕಾಮನಾಗಿ ಗಳಿಸಿದ ವೇದಾಂತಪಾಂಡಿತ್ಯವು ಕಂಠದಲ್ಲಿಯೇ ಉಳಿದು ವಾದಗೋಷ್ಠಿಯಲ್ಲಿ ಉಪಯುಕ್ತವಾಗುತ್ತದೆ.

ಈ ಶೀಕ್ಷಾವಲ್ಲಿಯಲ್ಲಿ ಪಂಚಮಹಾಸಂಹಿತೆಗಳೆಂಬ ಕುತೂಹಲಕರವಾದ ಉಪಾಸನಾವಿಷಯ ಬರುತ್ತದೆ. ಲೋಕ, ಜ್ಯೋತಿ, ವಿದ್ಯೆ, ಪ್ರಜೆ, ಆತ್ಮ–ಇವೇ ಐದು ವಿಷಯಗಳು. ವೇದಸಂಹಿತೆಯಲ್ಲಿ ಪೂರ್ವವರ್ಣ, ಪರವರ್ಣ ಇವೆರಡರ ಸಂಧಿ ಮತ್ತು ಸಂಧಾನಗಳಲ್ಲಿ ಬೇರೆ ಬೇರೆ ದೃಷ್ಟಿಯನ್ನಿಟ್ಟುಕೊಂಡು ಉಪಾಸನೆ ಮಾಡಬೇಕೆಂದು ಇಲ್ಲಿ ಹೇಳಿದೆ. ಸಂಧಿ ಎಂದರೆ ಎರಡು ವರ್ಣಗಳ ಉಚ್ಚಾರಣೆಯ ನಡುವೆ ಇರುವ ಅತ್ಯಲ್ಪಕಾಲ. ಸಂಧಾನವೆಂದರೆ ವರ್ಣಗಳನ್ನು ಜೋಡಿಸುವ ಸಾಧನ. ಇವು ಲೋಕಾದಿ ಪಂಚವಿಷಯಗಳಲ್ಲಿ ದೃಷ್ಟಿ ಭೇದಗಳನ್ನು ಪಡೆಯುತ್ತವೆ. ಉದಾಹರಣೆಗೆ ಲೋಕದ ವಿಷಯದಲ್ಲಿ ಹೀಗೆ – ಪೂರ್ವವರ್ಣವು ಪೃಥಿವಿಯೆಂದೂ ಪರವರ್ಣವು ದ್ಯುಲೋಕವೆಂದೂ ಈ ವರ್ಣಗಳ ಸಂಧಿಯು ಆಕಾಶವೆಂದೂ, ಸಂಧಾನವು ವಾಯುವೆಂದೂ ದೃಷ್ಟಿಯನ್ನಿಟ್ಟು ಉಪಾಸನೆ ಮಾಡಬೇಕು. 'ವನಮಾಲಾ' ವ್ಯಾಖ್ಯಾನದಲ್ಲಿ ಇದಕ್ಕೊಂದು ಉದಾಹರಣೆಯನ್ನು ಕೊಟ್ಟಿದ್ದಾರೆ. 'ಇಷೇತ್‌ತ್ವಾ'. ಇಲ್ಲಿ ಏಕಾರವು ಪೂರ್ವವರ್ಣ. ತ್ವಾ ಎಂಬುದರ ತ ಕಾರವು ಪರವರ್ಣ. ಇವೆರಡರ ಮಧ್ಯಪ್ರದೇಶವು ಸಂಧಿ. ದೇಶದ ವ್ಯವಧಾನ ಲಿಪಿಯಲ್ಲಿ ಮಾತ್ರ. ವರ್ಣಗಳ ಉಚ್ಚಾರಣೆಯಲ್ಲಿ ನಡುವೆ ಇರುವುದು ಕಾಲಮಾತ್ರ. 'ಅನಚಿ ಚ' ಎಂಬ ವ್ಯಾಕರಣ ಸೂತ್ರದಿಂದ ತಕಾರಕ್ಕೆ ದ್ವಿತ್ವ ಬಂದು ತ್ವಾ ಶಬ್ದದ ತಕಾರದ ಹಿಂದೆ ಇನ್ನೊಂದು ತಕಾರ ಇದೆ. ಇದು ಸಂಧಾನ. ಲೋಕವಿಷಯದಲ್ಲಿ ಈ ತಕಾರವನ್ನು ವಾಯುವೆಂದು ತಿಳಿಯತಕ್ಕದ್ದು.

ಹೀಗೆ ಪಂಚಮಹಾಸಂಹಿತೆಗಳಲ್ಲಿ ಪೂರ್ವವರ್ಣವನ್ನು ಕ್ರಮವಾಗಿ ಪೃಥಿವೀ, ಅಗ್ನಿ, ಆಚಾರ್ಯ, ಮಾತೃ, ಕೆಳದವಡೆ ಎಂದು ತಿಳಿಯಬೇಕು. ಪರವರ್ಣವನ್ನು ಕ್ರಮವಾಗಿ ದ್ಯುಲೋಕ, ಆದಿತ್ಯ, ಶಿಷ್ಯ, ತಂದೆ, ಮೇಲ್ದವಡೆ ಎಂದು ಭಾವಿಸತಕ್ಕದ್ದು. ಹೀಗೆಯೇ ಸಂಧಿ, ಸಂಧಾನಗಳೂ ಬೇರೆಬೇರೆಯುಂಟು. ಈ ಪ್ರಕಾರವಾಗಿ ಪೃಥಿವೀ ಮೊದಲಾದ ದೃಷ್ಟಿಗಳನ್ನು ಸಂಹಿತಾವರ್ಣಗಳಲ್ಲಿಟ್ಟು ಉಪಾಸನೆಮಾಡಬೇಕೆಂದೂ ಅದರಿಂದ ಉಪಾಸಕನಿಗೆ ಪ್ರಜೆ (ಸಂತತಿ), ಪಶು ಮುಂತಾದ ಲಾಭಗಳುಂಟಾಗುತ್ತವೆಯೆಂದೂ ಹೇಳಲಾಗಿದೆ.

ಇದೊಂದು ವಿಚಿತ್ರವಾದ ಉಪಾಸನಾಪ್ರಕಾರವೆಂದು ನನಗೆ ತೋರುತ್ತದೆ. ವೇದದ ಎರಡೆರಡು ಅಕ್ಷರಗಳನ್ನು ಐದು ವಿಷಯಗಳಲ್ಲಿ ವಿಭಿನ್ನದೃಷ್ಟಿಯನ್ನಿಟ್ಟು ಉಪಾಸನೆಮಾಡತಕ್ಕವರು ಯಾರಾದರೂ ಇರಬಹುದೆ? ಇರಲಿ–ಇಲ್ಲದಿರಲಿ, ಉಪನಿಷತ್ತು ಉಪಾಸನೆಯನ್ನು ಹೇಳಿ ಉಪಾಸನಾಫಲವನ್ನು ನಿರ್ದೇಶಿಸಿದೆ ಎಂದು ಸಮಾಧಾನಮಾಡಿಕೊಳ್ಳಬಹುದು. 'ಸಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ' ಎಂದು ಉಪನಿಷತ್ತಿನಲ್ಲಿದೆ. ಇಲ್ಲಿ ಉಪನಿಷದಂ ಎಂಬುದಕ್ಕೆ 'ದರ್ಶನಂ' ಎಂದು ಭಾಷ್ಯಕಾರರು ಅರ್ಥಹೇಳಿದ್ದಾರೆ. ಈ ಐದು ಪ್ರಕಾರಗಳು ಮಹಾಸಂಹಿತೆಗಳೆಂದೂ ಇವನ್ನು ಯಾವನು ವೇದ ತಿಳಿದಿದ್ದಾನೋ ಅವನಿಗೆ ಪ್ರಜಾದಿಫಲಗಳು ದೊರೆಯುತ್ತವೆ ಎಂದೂ ಹೇಳಿದೆ. ಇಲ್ಲಿ 'ವೇದ' ಎಂಬ ಶಬ್ದವಿದೆ. ಇಲ್ಲಿ ಜ್ಞಾನವೆಂದರೆ ಉಪಾಸನೆಯೆಂದು ಭಾಷ್ಯಕಾರರು ಪ್ರಮಾಣಪುರಃಸರವಾಗಿ ಅರ್ಥವನ್ನು ಹೇಳಿದ್ದಾರೆ. ಅದು ಯುಕ್ತವಾಗಿದೆ.

ಆದರೆ ಉಪಾಸನೆಗಿಂತ ಅತಿರಿಕ್ತವಾದ ಇನ್ನೊಂದು ಆಶಯವೂ ಉಪನಿಷತ್ತಿನಲ್ಲಿದೆ ಎಂದು ನನ್ನ ಅಭಿಪ್ರಾಯವಿದೆ. ಭಾಷ್ಯಕಾರರೇ ಹೇಳದಿರುವಾಗ 'ನನ್ನ ಅಭಿಪ್ರಾಯ' ಎನ್ನುವುದು ಅಧಿಕಪ್ರಸಂಗತನವೆಂದು ಯಾರಾದರೂ ನುಡಿಯಬಹುದು. ಹಾಗಲ್ಲ; ಆಚಾರ್ಯರಿಗೆ ಅಧ್ಯಾತ್ಮ ವಿಚಾರವು ಮುಖ್ಯವಾದದ್ದು. ಲೌಕಿಕ ವಿಚಾರವನ್ನು ವಿಸ್ತರಿಸಿ ಹೇಳುವುದು ಅನಾವಶ್ಯಕವೆಂದು ಅವರು ಅದನ್ನು ಉಪೇಕ್ಷಿಸಿರಬಹುದು. ಶ್ರೀಶಂಕರಭಗವತ್ಪಾದರ ಪಾದಧೂಳಿಯ ಒಂದು ರೇಣುವನ್ನು ನನ್ನ ಶಿರಸ್ಸಿನಲ್ಲಿ ಧರಿಸಬಹುದಾದ ಯೋಗ್ಯತೆ ನನ್ನದು. ಈ ಯೋಗ್ಯತೆಯೂ ಸಹ ನನಗೆ ಆಚಾರ್ಯರ ವಿಷಯದಲ್ಲಿರುವ ಅತಿಶಯವಾದ ಭಕ್ತಿಗೌರವದಿಂದ ಮಾತ್ರ ಬಂದಿರಬಹುದು, ಜ್ಞಾನದಿಂದಲ್ಲ.

ಶಿಕ್ಷೋಪನಿಷತ್ ಅಧಿಲೋಕ, ಅಧಿಜ್ಯೋತಿಷ ಮುಂತಾದ ಪಂಚವಿಷಯಗಳನ್ನು ಮಹಾಸಂಹಿತೆಗಳೆಂದೂ ಇವನ್ನು ಯಾವನು (ವೇದ) ತಿಳಿದಿರುವನೋ ಅವನಿಗೆ ಪ್ರಜಾ, ಪಶು ಮುಂತಾದ ಫಲಸಂಪತ್ತು ದೊರೆಯುವದೆಂದೂ ಹೇಳಿದೆ. ಇಲ್ಲಿರುವ 'ಮಹಾ' ಶಬ್ದವನ್ನೂ 'ವೇದ' ಎಂಬುದರ ವಾಚ್ಯಾರ್ಥವು ಜ್ಞಾನವೆಂಬುದನ್ನೂ ಗಮನಿಸಬೇಕು. ಮುಂದೆ ಆಚಾರ್ಯನು ತನ್ನ ಅಂತೇವಾಸಿಗೆ ಬೋಧಿಸುವುದೆಲ್ಲವೂ ಗೃಹಸ್ಥಧರ್ಮವೇ ಹೊರತು ವಿರಕ್ತನಾದ ಯತಿಗೆ ಸಂಬಂಧಿಸಿದ್ದಲ್ಲವೆಂಬುದನ್ನೂ ಲಕ್ಷಿಸಬೇಕು. ಗುರುಕುಲದಿಂದ ನಿರ್ಗಮಿಸುವ ಶಿಷ್ಯನು ಮದುವೆಯಾಗಿ ಲೋಕವ್ಯವಹಾರದಲ್ಲಿ ತೊಡಗತಕ್ಕವನು. ಧನಾರ್ಜನೆಯನ್ನು ಮಾಡುತ್ತ ಸಂಸಾರಭಾರವನ್ನು ಹೊತ್ತು ಸಮಾಜದಲ್ಲಿ ಬೆರೆಯತಕ್ಕವನು. ಅವನಿಗೆ ಲೋಕವ್ಯವಹಾರವು ಚೆನ್ನಾಗಿ

ತಿಳಿದಿರಬೇಕು. ಇದುವರೆಗೆ ಗುರುಕುಲದಲ್ಲಿ ಪಂಜರದೊಳಗಿನ ಹಕ್ಕಿಯಂತೆ, ಸಮಾಜದಿಂದ ದೂರವಾಗಿ ಬಾಳಿದವನು. ಈಗಿನ ಶಾಲಾಕಾಲೇಜುಗಳ ವಿದ್ಯಾಭ್ಯಾಸದಂತೆ ಹಿಂದೆ ಗುರುಕುಲದ ವಿದ್ಯಾಭ್ಯಾಸವಿರಲಿಲ್ಲ. ವೇದ ಶಾಸ್ತ್ರಗಳ ಹೊರತಾಗಿ ಬಾಹ್ಯವಿಚಾರವನ್ನೇನೂ ಅಲ್ಲಿ ಕಲಿಸುತ್ತಿರಲಿಲ್ಲ. ಈ ಕಾರಣಗಳಿಂದ ಗುರುಕುಲದ ಆಚಾರ್ಯನು ಶಿಷ್ಯನನ್ನು ಬೀಳ್ಕೊಡುವಾಗ ಲೋಕವ್ಯವಹಾರಕ್ಕೆ ಅತ್ಯಾವಶ್ಯಕವಾದ ಈ ವಿಷಯಗಳೆಲ್ಲವನ್ನೂ ಬಲ್ಲವರಿಂದ ತಿಳಿದುಕೊಳ್ಳಬೇಕೆಂದು ಶಿಷ್ಯನಿಗೆ ಹಿತೋಪದೇಶವನ್ನು ಮಾಡುತ್ತಾನೆ.

**ಅಥಾಧಿಲೋಕಮ್ – ಪೃಥಿವೀಪೂರ್ವರೂಪಮ್.**

ಗೃಹಸ್ಥನಾಗಿ ವ್ಯವಹಾರದಲ್ಲಿ ತೊಡಗತಕ್ಕವನು ಮೊದಲು ತಾನಿರುವ ಲೋಕದ ಸ್ಥಿತಿಗಳನ್ನರಿತಿರಬೇಕು. ಅವನಿರುವುದು ಈ ಪೃಥ್ವಿಯಲ್ಲಿ ಸಮಾಜದ ನಡುವೆ. ಈ ಲೋಕದಲ್ಲಿರುವ ನಾನಾ ದೇಶಗಳು, ಕ್ಷೇತ್ರಗಳು, ನದಿ ಬೆಟ್ಟ ಅರಣ್ಯ ಮುಂತಾದುದರ ಸಾಮಾನ್ಯ ಪರಿಚಯ ಅವಶ್ಯಕ. ಆಹಾರ ವಸ್ತ್ರ ಮುಂತಾದವು ಎಲ್ಲಿ ದೊರೆಯುತ್ತವೆ, ಹೇಗೆ ನಿರ್ಮಾಣಗೊಳ್ಳುತ್ತವೆ ಎಂಬುದನ್ನು ಅರಿತಿರುವುದು ಆವಶ್ಯಕ. ಸಮಾಜದಲ್ಲಿ ಮಿತ್ರರೂ, ಬಂಧುಗಳೂ, ದ್ವೇಷಿಗಳೂ, ಉದಾಸೀನರೂ ಇರುತ್ತಾರೆ. ಅವರ ಗುಣಸ್ವಭಾವಗಳೂ ಉಪಕಾರ–ಅಪಕಾರಗಳೂ ಎಂತಹವೆಂಬುದರ ಅರಿವು ಸಮಾಜ ಜೀವಿಗೆ ಆವಶ್ಯಕ. ಇವೇ ಮೊದಲಾದವುಗಳ ಸಾಮಾನ್ಯಜ್ಞಾನವನ್ನು ಗಳಿಸಿಕೊಂಡವನು ಯಶಸ್ವಿಯಾಗಿ ಬಾಳಲು ಸಾಧ್ಯ. ಈ ಲೋಕದಲ್ಲಿ ಧರ್ಮಮಾರ್ಗದಿಂದ ಅರ್ಥಕಾಮಗಳನ್ನು ಸಾಧಿಸಿಕೊಂಡು ಗೃಹಸ್ಥಜೀವನವನ್ನು ಸಾಗಿಸಬೇಕಾಗುತ್ತದೆ.

**ದ್ಯೌರುತ್ತರರೂಪಮ್**

ಈ ಲೋಕವಾದ ಮೇಲೆ ಪರಲೋಕದ ವಿಚಾರ. ದ್ಯೌಃ ಎಂದರೆ ಸ್ವರ್ಗ ಮತ್ತು ಬಾಹ್ಯಾಕಾಶ. ಭೂಲೋಕದ ಸೌಖ್ಯವೇನೂ ಶಾಶ್ವತವಲ್ಲ. ಮೇಲೆ ನೋಡು. ಬಾಹ್ಯಾಕಾಶದಲ್ಲಿ ಗ್ರಹನಕ್ಷತ್ರಾದಿಗಳು ಇರುವಂತೆ ಸ್ವರ್ಗಲೋಕವೆಂಬುದೂ ಇದೆ. ಮುಂದಿನ ಜನ್ಮದಲ್ಲಿ ಅದನ್ನು ಪಡೆಯಲು ಶಕ್ಯವಿದೆ. ವೇದವಿಹಿತ–ಕರ್ಮಾನುಷ್ಠಾನದಿಂದ ಅದು ಲಭ್ಯವಿದೆ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ–ಯಜೇತ' ಇತ್ಯಾದಿ ಶ್ರುತಿವಚನಗಳನ್ನು ಅಧ್ಯಯನ ಮಾಡಿರುವೆಯಷ್ಟೆ. ಕರ್ಮಕಾಂಡದಲ್ಲಿ ಹೇಳಿದ ಉಪಾಸನೆಗಳಿಂದಲೂ ಯಾಗಾದಿಕ್ರಿಯೆಗಳಿಂದಲೂ 'ಸಂಧೀಯತೇ ಪ್ರಜಯಾ ಪಶುಭಿಃ, ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗ್ಯೇಣ ಲೋಕೇನ'.

ಈ ಭೂಲೋಕ–ಸ್ವರ್ಗಗಳ ನಡುವೆ ಆಕಾಶವಿದೆ. ಇದು ಬಹುವಿಸ್ತೃತವೂ ಅದ್ಭುತವೂ ಆದ ಭಗವಂತನ ಸೃಷ್ಟಿ 'ಕಿಂ ಜ್ಯೋತಿರ್ಮಹತೋಽಸ್ಮಾದಾಕಾಶಾದಪಿ ಭೂಯಃ' ಎಂದು ಶ್ರೀ ವಾಸಿಷ್ಠಗಣಪತಿ ಶಾಸ್ತ್ರಿಗಳು ಉಮಾಸಹಸ್ರವೆಂಬ ಗ್ರಂಥದಲ್ಲಿ ಉದ್ಗರಿಸಿದ್ದಾರೆ. ಮಾನವನು ರಾಕೆಟ್ಟಿನಲ್ಲಿ ಎಷ್ಟು ಎತ್ತರ ಹಾರಿದರೂ ಸ್ವರ್ಗವನ್ನು ತಲುಪಲಾರ. ವೇದೋಕ್ತವಾದ ಅನುಷ್ಠಾನವು ಮಾತ್ರ ಸ್ವರ್ಗಕ್ಕೆ ಕರೆದೊಯ್ಯಬಲ್ಲದು. ಇಹಲೋಕ–ಪರಲೋಕಗಳನ್ನು ಕೂಡಿಸಬಲ್ಲ ಸಂಧಾನವೇ ವಾಯು. ಅದೇ ಪ್ರಾಣಿಗಳ ಪ್ರಾಣ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಹೆಸರುಗಳನ್ನು ತನ್ನ ಕ್ರಿಯಾಭೇದದಿಂದ ಪಡೆದು ಮಾನವನೇ ಮೊದಲಾದ ಸಕಲಪ್ರಾಣಿಗಳನ್ನೂ ಜೀವಂತವಾಗಿ ಉಳಿಸಿದೆ. ಇದೇ ಮಾನವನ ಜೀವಾಳ. ಮನುಷ್ಯನು ಪುರುಷಾರ್ಥಗಳನ್ನು ಕ್ರಮವಾಗಿ ಸಾಧಿಸಿಕೊಳ್ಳಲೆಂದು ಉಪಕರಿಸುವುದಕ್ಕಾಗಿ ಈ ದೇಹದಲ್ಲಿ ಉಸಿರಾಗಿ ಹಗಲಿರುಳೂ ಶ್ರಮಿಸುತ್ತಿದೆ. ಎಲೈ ಶಿಷ್ಯ, ಇದನ್ನು ಗಮನಿಸು ಎಂದು ಉಪನಿಷತ್ತು ಬೋಧಿಸುತ್ತದೆ.

**ಅಥಾಧಿಜ್ಯೋತಿಷಮ್ ಅಗ್ನಿಃ ಪೂರ್ವರೂಪಮ್**

ಗೃಹಸ್ಥನಾದ ವೈದಿಕನಿಗೆ ಅಗ್ನಿಯೇ ಮುಖ್ಯವಾದ ಜ್ಯೋತಿ. ಅಗ್ನಿಯಿಲ್ಲದೆ ಅಗ್ನಿಹೋತ್ರ, ವೈಶ್ವದೇವಾದಿ ಕರ್ಮಗಳೇ ನಡೆಯಲಾರವು. ಮೊದಲನೆಯದಾಗಿ ಅನ್ನಮಾಡಲು ಅಗ್ನಿಬೇಕು. ಅನ್ನವಿಲ್ಲದೆ ದೈನಿಕವಾದ ಪಂಚಯಜ್ಞಗಳು ಸಿದ್ಧಿಸುವುದಿಲ್ಲ.

**ಆದಿತ್ಯ ಉತ್ತರರೂಪಮ್**

ಎರಡನೆಯ ಸ್ಥಾನವು ಸೂರ್ಯನಿಗೆ ಸಲ್ಲುತ್ತದೆ. ಸೂರ್ಯನಿಂದಾಗುವ ಉಪಕಾರವು ಸರ್ವರಿಗೂ ಸ್ಪಷ್ಟವಾಗಿದೆ. ರಾತ್ರಿಯಲ್ಲಿ ಸೂರ್ಯನಿಲ್ಲದಿದ್ದರೂ ದೀಪದ ಬೆಳಕಿನಲ್ಲಿ ಕಾರ್ಯವನ್ನು ನಿರ್ವಹಿಸಬಹುದು. ಆದ್ದರಿಂದ ಅಗ್ನಿಗೇ ಪ್ರಥಮಸ್ಥಾನವು ಸಲ್ಲುತ್ತದೆ.

**ಆಪಃ ಸಂಧಿಃ**

ಅಧಿಜ್ಯೋತಿಷಮ್ ಎಂಬಲ್ಲಿ ಜ್ಯೋತಿಃ ಶಬ್ದಕ್ಕೆ ಜಹಲ್ಲಕ್ಷಣೆಯಿಂದ ಜಲವು ಗೃಹೀತವಾಗುತ್ತದೆಯೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಜಲದಲ್ಲಿ ಅಗ್ನಿಯ ಅಂಶ ಇದೆ. ಆಮ್ಲಜನಕ (ಆಕ್ಸಿಜನ್) ಎಂಬ ಅನಿಲವು ಅಗ್ನಿಯ ಇನ್ನೊಂದು ರೂಪ. ಅದರೊಡನೆ ಜಲಜನಕ (ಹೈಡ್ರೋಜನ್) ಎಂಬ ಅನಿಲವು ಸೇರಿದರೆ ಉಭಯವೂ ಜಲವಾಗಿ ಪರಿಣಮಿಸುತ್ತದೆ ಎಂಬ ವೈಜ್ಞಾನಿಕ ಸಿದ್ಧಾಂತವು ಇಲ್ಲಿ

ಗಮನಾರ್ಹವಾದದ್ದು. ಆದ್ದರಿಂದಲೇ ಸೃಷ್ಟಿಪ್ರಕರಣದಲ್ಲಿ 'ಆಗ್ನೇರಾಪಃ' ಎಂದು ಶ್ರುತಿವಚನವಿದೆ. ಸ್ನಾನಾದಿಕ್ರಿಯೆಗಳಿಗೆ ಜಲವು ಅತ್ಯಾವಶ್ಯಕವಾದದ್ದು.

ಸೂರ್ಯನಿಂದ ಉತ್ಪನ್ನವಾದ ಜಲಮಯಮೇಘಗಳ ಘರ್ಷಣೆಯಿಂದ ವಿದ್ಯುತ್(ಮಿಂಚು) ಉತ್ಪನ್ನವಾಗುತ್ತದೆ. ಮಿಂಚು ಅಗ್ನಿರೂಪವಾದದ್ದು. ಆದುದರಿಂದ ಅಗ್ನಿ ಸೂರ್ಯರ ಸಂಧಾನವೇ ವಿದ್ಯುತ್. ಇದೆಲ್ಲವನ್ನೂ ಮನುಷ್ಯನು ತಿಳಿದಿರಬೇಕು ಎಂದು ಉಪನಿಷತ್ತು ತಿಳಿಸಿದೆ. ಹೀಗೆಯೇ ಮುಂದಿನ ಮೂರು ಮಹಾಸಂಹಿತೆಗಳಲ್ಲಿಯೂ ಉಪದೇಶವಿದೆ.

**ಅಧಿವಿದ್ಯೆ**

ಮಹಾಸಂಹಿತೆಗಳಲ್ಲಿ ಮೊದಲನೆಯದು ಲೋಕವ್ಯವಹಾರದಲ್ಲಿ ತೊಡಗಿದ ಸಾಮಾಜಿಕನಿಗೆ ಇರಬೇಕಾದ ಸಾಮಾನ್ಯಜ್ಞಾನವನ್ನು ತಿಳಿಸಿದೆ. ಎರಡನೆಯದು ವೈಯಕ್ತಿಕವಾಗಿ ಗೃಹಸ್ಥನಿಗೆ ಬೇಕಾದ ವಿಷಯಗಳನ್ನು ಪ್ರಸ್ತಾವಿಸಿದೆ. ಈಗ ಮೂರನೆಯ ಅಧಿವಿದ್ಯೆಯು ಗೃಹಸ್ಥನ ಜೀವನೋಪಾಯದ ಮಾರ್ಗವನ್ನು ಪ್ರಸ್ತಾವಿಸುತ್ತದೆ.

'ಅಧ್ಯಾಪನಂ ಬ್ರಾಹ್ಮಣಸ್ಯ ವೃತ್ತಿಃ.' ಗುರುಕುಲದಿಂದ ನಿರ್ಗಮಿಸಿದವನು ಸ್ವಾಧ್ಯಾಯಪ್ರವಚನಗಳನ್ನು ಎಂದಿಗೂ ಬಿಡಬಾರದು. ಸ್ವಾಧ್ಯಾಯವೆಂದರೆ ಪ್ರತಿದಿನವೂ ವೇದಪಠನ ಮತ್ತು ಶಾಸ್ತ್ರಾವಲೋಕನ. ಪ್ರವಚನದಿಂದ ಇದು ದೃಢವಾಗಿ ನಿಲ್ಲುತ್ತದೆ. ಜ್ಞಾನಪ್ರಸಾರವಾಗುತ್ತದೆ. ವೇದೋದಿತವಾದ ಜ್ಞಾನಮಾರ್ಗವು ಲೋಕದಲ್ಲಿ ಉಳಿಯಬೇಕು, ಬೆಳೆಯಬೇಕು. ಇದರಿಂದ ಜನತೆಯ ಕಲ್ಯಾಣವಾಗಲಿ ಎಂಬುದೇ ವೇದವನ್ನು ಪ್ರಕಾಶಿಸಿದ ಭಗವಂತನ ಉದ್ದೇಶವಾಗಿರುತ್ತದೆ. ಆದ್ದರಿಂದ ಜ್ಞಾನೋಪದೇಶವೇ ಆಚಾರ್ಯನ ಪ್ರಥಮ ಕರ್ತವ್ಯ. ಆಚಾರ್ಯನ ಅರ್ಹತೆಯನ್ನು ತಿಳಿದು ಶಿಷ್ಯರು ಬಂದು ಸೇರುತ್ತಾರೆ. ಅಂತಹ ಅರ್ಹತೆಯನ್ನು ಗಳಿಸಿದ ಆಚಾರ್ಯನು 'ಆ ಮಾ ಯಂತು ಬ್ರಹ್ಮಚಾರಿಣಃ ಸ್ವಾಹಾ' ಎಂದು ಹಾರೈಸುತ್ತಾನೆ.

ಆದುದರಿಂದ ಆಚಾರ್ಯನು ಪೂರ್ವರೂಪ. ಅಂತೇವಾಸಿಯು ಉತ್ತರರೂಪ. ವಿದ್ಯಾದಾನ–ವಿದ್ಯಾಗ್ರಹಣಗಳು ಉದ್ದಿಷ್ಟವಾದ್ದರಿಂದ ವಿದ್ಯೆಯೇ ಸಂಧಿ. ಪ್ರವಚನವು ಸಂಧಾನ. ಮುಂದೆ ಶಿಷ್ಯನು ಅರ್ಪಿಸುವ 'ಪ್ರಿಯಧನ'ವು ಆಚಾರ್ಯನ ಜೀವನವನ್ನು ಭರಿಸಬೇಕು.

**ಅಧಿಪ್ರಜ**

ಪ್ರಜಾತಂತುವನ್ನು ಮುಂದುವರಿಸು ಎಂದು ಆಚಾರ್ಯನು ಬೋಧಿಸಿದುದರ ಪ್ರಸ್ತುತಿ ಇದು. ಮಗುವನ್ನು ಹಡೆದು ಪೋಷಣೆ ಮಾಡತಕ್ಕವಳು ಗೃಹಿಣಿ; ತಾಯಿಯಾದವಳು. ಅವಳಿಗೆ ಗೃಹದಲ್ಲಿ ಗೌರವಸ್ಥಾನವಿರತಕ್ಕದ್ದು. ತಂದೆಗಿಂತ ತಾಯಿಗೆ ಹತ್ತರಷ್ಟು ಗೌರವ ಸಲ್ಲಬೇಕೆಂದು ಮನುಸ್ಮೃತಿ ಹೇಳಿದೆ. ಆದ್ದರಿಂದ ಮಾತಾ ಪೂರ್ವರೂಪಮ್, ಪಿತಾ ಉತ್ತರರೂಪಮ್, ಪ್ರಜಾ ಸಂಧಿಃ. 'ಆನಂದಗ್ರಂಥಿರೇಕೋಽಯಮಪತ್ಯಮಿತಿ ಕಥ್ಯತೇ' ಎಂದು ಮಹಾಕವಿ ಭವಭೂತಿಯ ವಾಣಿ. ಪ್ರಜನನವು ಶಾಸ್ತ್ರವಿಹಿತ. ಧರ್ಮಶಾಸ್ತ್ರವು ಅದನ್ನು ವ್ಯವಸ್ಥೆಗೊಳಿಸಿದೆ. ಅದೆಲ್ಲವನ್ನೂ ಗೃಹಸ್ಥನು ಅರಿತಿರಬೇಕು.

**ಅಧ್ಯಾತ್ಮಮ್**

ಆತ್ಮವೆಂದರೆ ಇಲ್ಲಿ ಶರೀರ. ಸಿಂಹಾವಲೋಕನನ್ಯಾಯದಿಂದ ಪ್ರವಚನದ ವಿಷಯವನ್ನಿಲ್ಲಿ ಹೇಳಲಾಗಿದೆ. ಶಿಕ್ಷಾಶಾಸ್ತ್ರದಲ್ಲಿ ವಾಗುಚ್ಚಾರಣ ವಿಧಿ ಇದೆಯಷ್ಟೆ. ಅದನ್ನೇ ಇಲ್ಲಿ ಮತ್ತೆ ಪ್ರಸ್ತಾವಿಸಿ ಅದನ್ನು ದೃಢಗೊಳಿಸಲಾಗಿದೆ. ಅಥವಾ ವೇದಶಾಸ್ತ್ರಗಳ ವಿಷಯದಲ್ಲಿ ಮಾತ್ರವಲ್ಲ, ಲೋಕವ್ಯವಹಾರದಲ್ಲಿ ಮಾತನ್ನು ಸ್ಫುಟವಾಗಿ ಸ್ವಚ್ಛವಾಗಿ ವ್ಯಾಕರಣಶುದ್ಧವಾಗಿ ನುಡಿಯಬೇಕು. ಅಂತೆಯೇ ಬರಬೇಕು ಎಂಬುದು ಶ್ರುತಿಯ ಆಶಯವಾಗಿರಬೇಕು. ನಮ್ಮ ಅಭಿಪ್ರಾಯವು ಇನ್ನೊಬ್ಬರಿಗೆ ತಿಳಿದರಾಯಿತು. ಅದನ್ನು ಹೇಗೆ ಉಚ್ಚರಿಸಿದರೇನು? ಎಂಬ ಉಪೇಕ್ಷೆ ಸಲ್ಲದು. ಅಪಶಬ್ದಗಳನ್ನು ನುಡಿಯುತ್ತಿದ್ದ ಕೆಲವರು ಮ್ಲೇಚ್ಛರಾದರೆಂದು ಮಹಾಭಾಷ್ಯವು ಅಪಶಬ್ದಗಳನ್ನಾಡುವುದನ್ನು ನಿಂದಿಸಿದೆ.

ಮೂಲಾಧಾರಸ್ಥಿತವಾದ ಪರಾವಾಕ್ ಕ್ರಮೇಣ ಪಶ್ಯಂತೀ ಮಧ್ಯಮಾ ಸ್ಥಿತಿಗಳನ್ನು ಪಡೆದು ಬಾಯಿಯಿಂದ ಹೊರಬೀಳುವಾಗ ವೈಖರೀವಾಕ್ ಎನಿಸಿದೆ. ಲೋಕದಲ್ಲಿ ಜ್ಞಾನ ಪ್ರಸಾರವಾಗುವುದು ಶಬ್ದದಿಂದಲೇ. ಮಾತಾಡುವ ಶಕ್ತಿಯು ಮನುಷ್ಯರಿಗೆ ದೇವರು ಅನುಗ್ರಹಿಸಿದ ಒಂದು ವರವಾಗಿದೆ.

ಮಾತಾಡಲು ಮನುಷ್ಯರಿಗೆ ಬಾರದಿದ್ದರೆ, ಮನುಷ್ಯರಿಗೂ ಮೃಗಗಳಿಗೂ ಭೇದವೇ ಇರುತ್ತಿರಲಿಲ್ಲ. ಮನುಷ್ಯನು ಅರಣ್ಯದ ಮೃಗವಾಗಿ ಬಿಡುತ್ತಿದ್ದನು. "ಶಬ್ದವೆಂಬ ಜ್ಯೋತಿಯು ಸಂಸಾರದಲ್ಲಿ ಬೆಳಗದೇ ಹೋಗಿದ್ದರೆ, ಈ ಜಗತ್ತು ಅಜ್ಞಾನದ ಕತ್ತಲೆಯಲ್ಲಿ ಮುಳುಗಿಹೋಗುತ್ತಿತ್ತು" ಎಂದು ಮಹಾಕವಿ ದಂಡಿಯು ಹೇಳಿದ್ದಾನೆ.

**"ಇದಮಂಧಂ ತಮಃ ಕೃತ್ಸ್ನಂ ಜಾಯೇತ ಭುವನತ್ರಯಮ್ ।**
**ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಂ ನ ದೀಪ್ಯತೇ ॥"**

ಆದ್ದರಿಂದ ಶಬ್ದೋಚ್ಚಾರಣೆಯ ವಿಚಾರವನ್ನು ಶ್ರುತಿಯು ಮತ್ತೆ ಪ್ರಸ್ತಾವಿಸಿದೆ.

ವಾಸ್ತವವಾಗಿ ಇದು ಸಮಸ್ತ ಮಾನವರ ಶ್ರೇಯಸ್ಸಿಗಾಗಿ ಉಪನಿಷತ್ತು ಅನುಗ್ರಹಿಸಿದ ಹಿತೋಪದೇಶ. ಆದ್ದರಿಂದಲೇ ಇವು ಮಹಾಸಂಹಿತೆ–ಗಳೆನಿಸಿಕೊಂಡಿವೆ. 'ಯ ಏವಮೇತಾ ಮಹಾಸಂಹಿತಾ ವ್ಯಾಖ್ಯಾತಾ ವೇದ' ಎಂದು ಉಪನಿಷತ್ತು ಹೇಳಿದೆ. ಸೂತ್ರರೂಪದಲ್ಲಿರುವ ಇವು ವ್ಯಾಖ್ಯಾನಸಾಪೇಕ್ಷವಾದವು. ಇದುವರೆಗೆ ಬರೆದಿರುವುದು ವ್ಯಾಖ್ಯಾನದ ಒಂದು ಅಂಶ. ಇನ್ನೂ ಇದರಲ್ಲಿ ಅಡಗಿರಬಹುದಾದ ಗೂಡಾರ್ಥವನ್ನು ತಿಳಿದು ಅದರಂತೆ ಭಕ್ತಿಶ್ರದ್ಧೆಗಳಿಂದ ನಡೆದುಕೊಳ್ಳುವುದೂ ಉಪಾಸನೆಯೇ ಆಗುತ್ತದೆ. ಇಷ್ಟನ್ನು ನಾನು ವ್ಯಾಖ್ಯಾನಿಸಿರುವುದು ಶ್ರೀಶಂಕರಭಗವತ್ಪಾದರ ಅನುಗ್ರಹದಿಂದಲೇ ಎಂದು ಭಾವಿಸಿದ್ದೇನೆ.

ಧರ್ಮಬುದ್ಧಿಯಿಂದ ಜೀವಿಸತಕ್ಕವನಿಗೆ ಕ್ರಮವಾಗಿ ಪಾರಮಾರ್ಥಿಕದ ಕಡೆ ಬುದ್ಧಿ ಹೊರಳುವುದು ನಿಸರ್ಗದ ಪ್ರಭಾವದಿಂದಲೇ ಸರಿ. ಆ ಮಾರ್ಗದಲ್ಲಿ ಓಂಕಾರೋಪಾಸನೆ ಇನ್ನೊಂದು ಹೆಜ್ಜೆಯಾಗಿದೆ. ಅದನ್ನೇ ಮುಂದಿನ ಅನುವಾಕದಲ್ಲಿ ಉಪನಿಷತ್ತು ಹೇಳಿದೆ. ಓಂಕಾರವೇ ಪ್ರಣವ. ಇದು ಸಮಸ್ತವೇದಗಳಲ್ಲಿ ಸಾರಿಷ್ಠವಾದುದು. ಸಮಸ್ತವಾಕ್ಕುಗಳನ್ನೂ ವ್ಯಾಪಿಸಿರುವ ಇಂದ್ರ ಇದು. ಈಶ್ವರವಾಚಕಶಬ್ದಗಳಲ್ಲಿ ಪ್ರಧಾನವಾದದ್ದು ಪ್ರಣವ. "ತಸ್ಯ ವಾಚಕಃ ಪ್ರಣವಃ" ಎಂದು ಯೋಗಸೂತ್ರವಿದೆ.

## ಬ್ರಹ್ಮವಲ್ಲೀ

ಇದಕ್ಕೆ ಆನಂದವಲ್ಲಿಯೆಂಬ ಇನ್ನೊಂದು ಹೆಸರೂ ಉಂಟು. ಹಿಂದಿನ ಶಿಕ್ಷಾವಲ್ಲಿಯಲ್ಲಿ ಹೇಳಿದ ಉಪಾಸನೆಗಳು ಸಗುಣೋಪಾಸನೆಗಳು. ಅನಂತರ ಓಂಕಾರ ಮತ್ತು ವ್ಯಾಹೃತಿಗಳು ಬ್ರಹ್ಮವೆಂದು ಹೇಳಿದೆ. ಶಬ್ದಗಳು ಉಪಾಧಿಗಳಾದ್ದರಿಂದ ಅವೆಲ್ಲವೂ ಸೋಪಾಧಿಕವಾದ ಅಪರಬ್ರಹ್ಮದ ವಿಷಯವಾಗುತ್ತದೆ. ಹೃದಯಗುಹೆಯಲ್ಲಿರುವ ಬ್ರಹ್ಮದರ್ಶನವೂ ಸಹ ಸ್ಥಳವಿಶೇಷದಿಂದ ಕೂಡಿದ್ದರಿಂದ ಸೋಪಾಧಿಕವೇ ಸರಿ. ನಿರುಪಾಧಿಕವಾದ ಪರಬ್ರಹ್ಮಜ್ಞಾನದಿಂದಲೇ ಮೋಕ್ಷವೆಂದು ಸಿದ್ಧಾಂತವಿರುವುದರಿಂದ ಅದನ್ನು ತಿಳಿಸುವುದಕ್ಕಾಗಿ ಈ ಬ್ರಹ್ಮವಲ್ಲಿಯು ಹೊರಟಿದೆ. ಸಮಸ್ತ ಉಪದ್ರವಗಳಿಗೆ ಸಂಸಾರವೇ ಮೂಲ. ಈ ಸಂಸಾರಕ್ಕೆ ಅವಿದ್ಯೆಯೇ ಬೀಜ. ಇದರ ನಿವೃತ್ತಿಯು ನಿರುಪಾಧಿಕವಾದ ಪರಬ್ರಹ್ಮಜ್ಞಾನದಿಂದಲೇ ಆಗುತ್ತದೆ. ಅವಿದ್ಯಾನಿವೃತ್ತಿಯೆಂದರೆ

ಚೈತನ್ಯ (ಆತ್ಮ)ದೊಡನೆ ಸಂಬಂಧಿಸುವ ಅರ್ಹತೆಯನ್ನು ಅವಿದ್ಯೆಯು ಕಳೆದುಕೊಳ್ಳುವುದು ಎಂದರ್ಥ. ಆಗ ಅವಿದ್ಯಾಫಲವಾದ ಸಂಸಾರವಿರುವುದಿಲ್ಲ–ವಾದ್ದರಿಂದ ಪುನರ್ಜನ್ಮವೇ ತಪ್ಪಿಹೋಗುತ್ತದೆ. ಜೀವಾತ್ಮನು ತನ್ನ ನಿಜ ಸ್ವರೂಪದಲ್ಲಿ ನಿಲ್ಲುತ್ತಾನೆ. ಅದೇ ಸಂಸಾರದ ಬಿಡುಗಡೆಯೆಂಬ ಮೋಕ್ಷ. 'ಸ್ವಸ್ವರೂಪಾವಸ್ಥಾನಂ ಮೋಕ್ಷಃ' ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ.

'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯಗಳಿಂದ ವಿಶ್ವದ ಸೃಷ್ಟಿಯು ಹೇಗಾಯಿತೆಂಬುದನ್ನು ಉಪನಿಷತ್ತು ವರ್ಣಿಸಿದೆ. ಈ ಸೃಷ್ಟಿಯು ಪಾರಮಾರ್ಥಿಕವಾಗಿ ಇಲ್ಲವಾದರೂ ವ್ಯಾವಹಾರಿಕವಾಗಿ ಕಣ್ಣೆದುರಿನಲ್ಲಿ ಕಾಣಿಸುತ್ತದೆ. ವ್ಯಾವಹಾರಿಕವಾದ ಸತ್ಯವಾದರೂ ನಮ್ಮ ಮನಸ್ಸಿಗೆ ನಾಟುವಂತೆ ವ್ಯವಹಾರದ ಕ್ರಮವನ್ನೇ ತಿಳಿಸಿರುವುದು ಉಪನಿಷತ್ತಿನ ಒಂದು ವೈಶಿಷ್ಟ್ಯವೇ ಸರಿ. ಇಸ್ಲಾಂ ಮತದಲ್ಲಾಗಲಿ ಕ್ರೈಸ್ತಮತದಲ್ಲಾಗಲಿ ಸೃಷ್ಟಿಯ ಕ್ರಮನಿರ್ದೇಶವಿಲ್ಲ. ದೇವರು ಈ ಜಗತ್ತನ್ನು ಸೃಷ್ಟಿಸಿದನು ಎಂದು ಹೇಳಿ ಅವು ಕೈತೊಳೆದುಕೊಳ್ಳುತ್ತವೆ. ಆಕಾಶಾದಿಗಳು ಮಿಥ್ಯೆಯಾದ್ದರಿಂದ ಪರಬ್ರಹ್ಮವು 'ವಸ್ತುತಃ' ಅಪರಿಚ್ಛಿನ್ನವೆಂದು ತಿಳಿಯಬೇಕು.

ಆತ್ಮನಿಂದ ಆಕಾಶವು ಹುಟ್ಟಿತು. ಅನಂತರ ಆಕಾಶ ಮೊದಲಾದ ಭೂತಗಳಿಂದ ವಾಯು ಮುಂತಾದವು ಕ್ರಮವಾಗಿ ಹುಟ್ಟಿದವು ಎಂದು ಹೇಳಿದೆಯಷ್ಟೆ. ಜಡವಸ್ತುವಿನಿಂದ ಇನ್ನೊಂದು ವಸ್ತು ಹುಟ್ಟುವುದು ಶಕ್ಯವಲ್ಲ. ಜಡವಸ್ತುವಿಗೆ ಇನ್ನೊಂದನ್ನು ನಿರ್ಮಿಸಲು ಸಾಧ್ಯವಿಲ್ಲ. ಸಾಧ್ಯವಾದರೆ ಅದು ಜಡವೇ ಅಲ್ಲ. ಒಂದು ಕಲ್ಲುಬಂಡೆಯಿಂದ ಇನ್ನೊಂದು ವಸ್ತು ಎಂದಿಗೂ ಹುಟ್ಟದು. ಆದ ಕಾರಣ, ಆಕಾಶದಿಂದ ವಾಯು ಹುಟ್ಟಿತು ಎಂದರೆ, ಆಕಾಶಸ್ವರೂಪವನ್ನು ಪಡೆದ ಆತ್ಮನಿಂದ ಅಥವಾ ಆಕಾಶತಾದಾತ್ಮ್ಯವನ್ನು ಪಡೆದ ಆತ್ಮನಿಂದ ವಾಯು ಹುಟ್ಟಿತು ಎಂದರ್ಥ. ಹೀಗೆಯೇ ವಾಯುಸ್ವರೂಪವನ್ನು ಪಡೆದ ಆತ್ಮನಿಂದ ಅಗ್ನಿಹುಟ್ಟಿತು. ಈ ಪ್ರಕಾರ ಅರ್ಥವನ್ನು ಮಾಡಿಕೊಳ್ಳಬೇಕು. ಇದು ವೇದಾಂತದ ನಿಲುವು.

ಆಕಾಶವು ಹುಟ್ಟಿತು ಎಂದರೇನು? ಆಕಾಶವು ಒಂದು ಶೂನ್ಯವಾಗಿ ನಮಗೆ ತೋರುತ್ತದೆ. ಆಕಾಶವು ಹುಟ್ಟದಿದ್ದಾಗ ಈ ವಿಶ್ವವು ಹೇಗಿದ್ದಿರಬಹುದು ಎಂದು ಊಹಿಸಿಕೊಳ್ಳಲೂ ನಮಗೆ ಸಾಧ್ಯವಾಗುವುದಿಲ್ಲ. ಅವಕಾಶಪ್ರದತ್ವ ಮತ್ತು ಶಬ್ದ ಎಂಬಿವು ಆಕಾಶದ ಗುಣಗಳೆಂದು ಭಗವತ್ಪಾದರು ಹೇಳುತ್ತಾರೆ. ತಾರ್ಕಿಕರೂ ಶಬ್ದವೆಂಬ ಗುಣಕ್ಕೆ ಆಶ್ರಯವಾದದ್ದು ಆಕಾಶವೆಂದು ಹೇಳುತ್ತಾರೆ. ಚಾರ್ವಾಕರು

ಆಕಾಶವೆಂಬ ಪದಾರ್ಥವನ್ನು ಒಪ್ಪುವುದಿಲ್ಲ.

ಸುಪ್ರಸಿದ್ಧ ವಿಜ್ಞಾನಿಯಾದ ಐನ್‌ಸ್ಟಿನ್ ಮಹಾಶಯನು ಆಕಾಶವು ಶೂನ್ಯವಲ್ಲ, ಅದು ಒಂದು ವಸ್ತು ಎಂದು ಹೇಳಿದ್ದಾನೆ. ಅತ್ಯಾಧುನಿಕವೆನಿಸಿದ ಕ್ವಾಂಟಮ್ ಭೌತಶಾಸ್ತ್ರವೂ ಆಕಾಶವು ಶೂನ್ಯವಲ್ಲ. ಅದು ಒಂದು ವಸ್ತು. ಅದರಲ್ಲಿ ಅತಿಸೂಕ್ಷ್ಮ ಕಣಗಳು ತಾವಾಗಿಯೇ ಹುಟ್ಟಿ ನಶಿಸುತ್ತವೆ ಎಂದು ಸಿದ್ಧಾಂತಿಸಿದೆ.

Quantum Physics has accepted space as plenum. It generates particles. It reabsorbs particles. It is something positive. It is not void. Einstein had a clearer understanding of Space, much clearer than modern Quantum Physics.

- Maya in Physics by N.C. Panda (Page 376)

ಉಪನಿಷತ್ತು ಹೇಳಿರುವುದು ಸತ್ಯವೆಂದು ವಿಜ್ಞಾನಶಾಸ್ತ್ರವು ಒಪ್ಪಿಕೊಂಡಿತು!

ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಇವೇ ಪಂಚ ಮಹಾಭೂತಗಳು. ಇವು ಜಗತ್ತಿನ ಮೂಲಭೂತ ದ್ರವ್ಯಗಳು. ಇವಕ್ಕೂ ಮೂಲಕಾರಣವಾದ ಚೈತನ್ಯವೆಂಬ ಆತ್ಮನ ವಿಷಯ ಒತ್ತಟ್ಟಿಗಿರಲಿ. ಅವನೇ ಜಗದ್ರೂಪನಾದರೂ ಜಗತ್ತಿನಲ್ಲಿ ಅವನು ಸೇರುವುದಿಲ್ಲ. ಜಗನ್ನಿರ್ಮಾಣಕ್ಕೆ ಮೂಲವಾದ ದ್ರವ್ಯವೇ ಆಕಾಶ. ಆಕಾಶದಲ್ಲಿ ಕಾಣಿಸಿಕೊಂಡ ಅತಿಸೂಕ್ಷ್ಮ ಕಣಗಳು (particles) ಒಟ್ಟುಗೂಡಿ ವಾಯು ಹುಟ್ಟಿತೆಂದೂ ಅನಂತರ ಅಗ್ನಿ, ಜಲ, ಪೃಥ್ವಿಗಳು ಕ್ರಮವಾಗಿ ಜನಿಸಿದವೆಂದೂ ಉಪನಿಷತ್ತು ಹೇಳಿದೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಕ್ರಮವಾಗಿ ಇವುಗಳಲ್ಲಿ ಉದ್ಭೂತವಾಗಿ ಗೋಚರಿಸುತ್ತವೆ. ಪಂಚಜ್ಞಾನೇಂದ್ರಿಯಗಳಿಗೆ ಗೋಚರಿಸತಕ್ಕ ಗುಣಗಳು ಇವು ಐದು ಮಾತ್ರ. ವಾಸ್ತವವಾಗಿ ಬಾಹ್ಯದಲ್ಲಿ ಇರತಕ್ಕ ಗುಣಗಳು ಇವು ಐದೇ. ಕಾಮ, ಕ್ರೋಧಾದಿಗಳು ಅಂತಃಕರಣದ ಮಾನಸಗುಣಗಳು. ಪಂಚಮಹಾಭೂತಗಳ ಸೃಷ್ಟಿಯಲ್ಲಿ ಒಂದು ವೈಜ್ಞಾನಿಕ ಕ್ರಮವು ನಮಗೆ ತೋರುತ್ತದೆ. ಇದರ ಸ್ಪಷ್ಟೀಕರಣವು ವಿಜ್ಞಾನಿಗಳಿಗೆ ಸೇರಿದೆ.

'ಯತೋ ವಾಚೋ ನಿವರ್ತಂತೇ' ಎಂದು ಆರಂಭವಾಗುವ ನವಮಾನುವಾಕದ ವಾರ್ತಿಕಗಳಲ್ಲಿ ಶ್ರೀ ಸುರೇಶ್ವರಾಚಾರ್ಯರು ಕೆಲವು ಅಮೂಲ್ಯ ವಿಚಾರಗಳನ್ನು ಹೇಳಿದ್ದಾರೆ. ಅವನ್ನು ಅನುಲಕ್ಷಿಸಿ ಕೆಲವು ಅಂಶಗಳನ್ನಿಲ್ಲಿ ಪ್ರಸ್ತಾವಿಸಬಹುದು.

"ಬ್ರಹ್ಮವನ್ನು ವರ್ಣಿಸಲಾರದೆ ವಾಕ್ಕುಗಳು ಹಿಂದಿರುಗುತ್ತವೆ. ಮನಸ್ಸು ಸಹ ಆ ವಸ್ತುವನ್ನರಿಯಲಾಗದೆ ಹಿಂದೆ ಸರಿಯುತ್ತದೆ" ಎಂದು ಮೇಲ್ಕಂಡ ಶ್ರುತಿಯ

ಅರ್ಥ. ವಾಕ್ಕು ಎಂದರೆ ಶಬ್ದವು ವರ್ಣಿಸಬೇಕಾದರೆ ಆ ವಸ್ತುವಿನಲ್ಲಿ ಜಾತಿ, ಗುಣ, ಕ್ರಿಯೆಗಳಲ್ಲೊಂದು ನಮಗೆ ಪರಿಚಿತವಾದ ಧರ್ಮವಿರಬೇಕು. ಅಥವಾ ಪೂರ್ವಪರಿಚಿತ ವ್ಯಕ್ತಿಗೆ ಇಟ್ಟಿರುವ ಸಂಜ್ಞೆಯಾಗಿರಬೇಕು. ಈ ನಾಲ್ಕನ್ನು ಶಬ್ದದ ಪ್ರವೃತ್ತಿ ನಿಮಿತ್ತಗಳೆನ್ನುತ್ತಾರೆ. ಶಬ್ದದ ಪ್ರಯೋಗಕ್ಕೆ ಇವು ನಿಮಿತ್ತಗಳು. ಇವಿಷ್ಟನ್ನೇ ಬೋಧಿಸುವ ಶಕ್ತಿ ಶಬ್ದಕ್ಕೆ ಇರುತ್ತದೆ. ಉದಾ

1. ಜಾತಿ– ಅಶ್ವತ್ವ, ಗೋತ್ವ, ಮನುಷ್ಯತ್ವ –ಅಶ್ವ, ಗೋವು, ಮನುಷ್ಯ ಇತ್ಯಾದಿ.

2. ಗುಣ – ಬಿಳುಪು, ಕೆಂಪು – ಮತ್ತು ಬಿಳಿಯದು, ಹವಳ ಕೆಂಪು.

3. ಕ್ರಿಯೆ – ಪಾಚನ, ಅಧ್ಯಾಪನ. ಅವನು ಪಾಚಕ, ಈತನು ಅಧ್ಯಾಪಕ.

4. ಸಂಜ್ಞೆ– ಇವನು ರಾಮ, ಅವನು ಕೃಷ್ಣ.

ಈ ನಾಲ್ಕು ಬಗೆಯ ಶಬ್ದಗಳ ಹೊರತಾಗಿ ಇನ್ನಾವ ವಸ್ತುನಿರ್ದೇಶಕ ಶಬ್ದವೂ ಯಾವ ಭಾಷೆಯಲ್ಲಿಯೂ ಇಲ್ಲ. ಬ್ರಹ್ಮದಲ್ಲಿ ಯಾವ ಜಾತಿ, ಗುಣ, ಕ್ರಿಯೆಗಳೂ ಇಲ್ಲ. ಬ್ರಹ್ಮವು ಪೂರ್ವಪರಿಚಿತವಲ್ಲವಾದ್ದರಿಂದ ಬ್ರಹ್ಮ, ಆತ್ಮ ಮುಂತಾದ ಸಂಜ್ಞಾ ಶಬ್ದಗಳೂ ಅದರ ಸ್ವರೂಪವನ್ನು ತಿಳಿಸಲಾರವು. ಶಿವ, ವಿಷ್ಣು ಮೊದಲಾದ ದೇವತೆಗಳ ವರ್ಣನೆ ಸಗುಣಮೂರ್ತಿಗೆ ಸಂಬಂಧಿಸಿದ್ದು. ನಿರ್ಗುಣಬ್ರಹ್ಮದ ವರ್ಣನೆಯಲ್ಲ. ಹೀಗಿರುವಾಗ ಯಾವ ವಾಕ್ಕು ಬ್ರಹ್ಮದ ಸ್ವರೂಪವನ್ನು ತಿಳಿಸಿಕೊಟ್ಟೀತು? ಅಪರಿಚಿತವಾದದ್ದನ್ನು ಮನಸ್ಸೂ ಸಹ ಕಲ್ಪಿಸಿಕೊಳ್ಳಲಾರದು. ಶಬ್ದಗೋಚರವಾದ್ದನ್ನು ಸಹ ಮನಸ್ಸೇ ತಿಳಿಯುತ್ತದೆ. ಅಂತಹ ಮನಸ್ಸಿಗೂ ಸಾಕ್ಷಿಯಾಗಿ, ವಾಕ್ಕಿಗೆ ವಾಕ್ಕೂ, ಮನಸ್ಸಿಗೆ ಮನಸ್ಸೂ ಆಗಿರುವ ಬ್ರಹ್ಮವನ್ನು ಮನಸ್ಸು ಹೇಗೆ ತಿಳಿದೀತು? 'ಸತ್ಯಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶ್ರುತಿಗಳೂ ಸಹ ವಾಚ್ಯವೃತ್ತಿಯಿಂದ ಬ್ರಹ್ಮಸ್ವರೂಪವನ್ನು ತಿಳಿಸಲಾರವು. ಲಕ್ಷಣಾವೃತ್ತಿಯಿಂದ ಬ್ರಹ್ಮದ ಕಡೆಗೆ ಕೈತೋರಿಸಿ ಸುಮ್ಮನಾಗುತ್ತವೆ. "ತತ್ ತ್ವಮಸಿ" ಎಂಬ ವಾಕ್ಯವು ಬ್ರಹ್ಮ ಮತ್ತು ಜೀವನಿಗೆ ಐಕ್ಯವನ್ನೇನೋ ತಿಳಿಸಿಕೊಡುತ್ತದೆ. ಆದರೆ ಅದು ಸ್ವಯಂಪ್ರಕಾಶವಾದ ಬ್ರಹ್ಮದ ಸ್ವರೂಪವನ್ನು ತಿಳಿಸಲಾರದೆ ಹಿಂದಿರುಗಿ ಬಿಡುತ್ತವೆ!

ವೇದವಾಗಲಿ ಅದರಿಂದಾಗುವ ಜ್ಞಾನವಾಗಲಿ ಬ್ರಹ್ಮವನ್ನು ವಿಷಯೀಕರಿಸುವುದೇ ಇಲ್ಲವೆಂದಾದರೆ ವೇದದಿಂದಾಗುವ ಪ್ರಯೋಜನವಾದರೂ ಏನು? ಪ್ರಯೋಜನವಿದೆ. ಅವಿದ್ಯೆಯನ್ನು (ಅಜ್ಞಾನವನ್ನು) ಹೋಗಲಾಡಿಸುವುದೇ ಪ್ರಯೋಜನ! ನಿದ್ರಿಸುತ್ತಿರುವವನ ಬಳಿಗೆ ಹೋಗಿ "ಏ ದೇವದತ್ತ, ಏಳು" ಎಂದು ಕೂಗಿದೊಡನೆ ಅವನ ನಿದ್ರೆಯು ಹೋಗಿ ಎಚ್ಚರವಾಗಿ

ಬಿಡುತ್ತದೆ. ನಿದ್ರಿಸುವಾಗ ಅವನಿಗೆ ನಮ್ಮ ಮಾತಿನ ಅರ್ಥವೇ ಆಗಿರುವುದಿಲ್ಲ. ಆದರೂ ನಿದ್ರೆಯು ಹೋಗಿ ಎಚ್ಚರವಾಗುತ್ತದೆ. ಶಬ್ದದ ಶಕ್ತಿ ಅಂತಹುದು. 'ಸತ್ಯಂಜ್ಞಾನಮನಂತಂ ಬ್ರಹ್ಮ, ತತ್‌ತ್ವಮಸಿ' ಇತ್ಯಾದಿ ಶ್ರುತಿ ವಾಕ್ಯವು ಮನುಷ್ಯನ ಅವಿದ್ಯೆಯನ್ನು ತೊಲಗಿಸುತ್ತದೆ. ಅವಿದ್ಯೆಯು ತೊಲಗಿದೊಡನೆ ಬ್ರಹ್ಮವು ಸ್ವಯಂಪ್ರಕಾಶಿಸುತ್ತದೆ. ಅವಿದ್ಯಾನಿವೃತ್ತಿಯೇ ಶ್ರುತಿಯಿಂದ ಆಗುವ ಪ್ರಯೋಜನ. ಇದು ಶಬ್ದ ಮಹಿಮೆ. ಎಷ್ಟಾದರೂ ಶಬ್ದಜ್ಞಾನಕ್ಕಿಂತ ಅಜ್ಞಾನವು ದುರ್ಬಲ. "ಇದು ಸರ್ಪವಲ್ಲ, ಹಗ್ಗ" ಎಂದೊಡನೆ ಸರ್ಪವೆಂಬ ಭ್ರಮೆ ಹೋಗಿಬಿಡುತ್ತದೆ. ಅವಿದ್ಯೆಯನ್ನು ತೊಲಗಿಸುವ 'ತತ್‌ತ್ವಮಸಿ' ಎಂಬ ವಾಕ್ಯದಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನ ಉದಿಸುತ್ತಲೇ ಅದೂ ಸಹ ಅವಿದ್ಯೆಯೊಡನೆ ತಾನೂ ನಾಶವಾಗಿ ಬಿಡುತ್ತದೆ! ರೋಗವನ್ನು ಹೋಗಲಾಡಿಸುವ ಔಷಧವೂ ರೋಗದೊಡನೆ ನಾಶವಾಗುವಂತೆ ಇದು. ಆಗ 'ಅಹಂ' ಎಂಬುದೂ ಇಲ್ಲ, 'ಅಸ್ಮಿ' ಎಂಬುದೂ ಇಲ್ಲ. ಬ್ರಹ್ಮವೆಂಬ ಚೈತನ್ಯಜ್ಯೋತಿಯೊಂದೇ ವಿರಾಜಿಸುತ್ತದೆ.

**ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ ॥**

ಬ್ರಹ್ಮದ ಆನಂದವೆಂದರೆ ಬ್ರಹ್ಮವೇ ಆದ ಆನಂದವೆಂದರ್ಥ. ರಾಹೋಃ ಶಿರಃ-ರಾಹುವಿನ ಶಿರಸ್ಸು ಎಂಬ ಹಾಗೆ ಕಲ್ಪಿತವಾದ ಅವಸ್ಥಾಭೇದದಿಂದ ಷಷ್ಠೀ ವಿಭಕ್ತಿ ಬಂದಿದೆ. ಈ ಬ್ರಹ್ಮಾನಂದವನ್ನು ತಿಳಿದವನು ಬ್ರಹ್ಮವೇ ಆದ್ದರಿಂದ ಅವನಿಗೆ ಯಾವ ವಸ್ತುವಿನಿಂದಲೂ ಭಯವಿಲ್ಲ. ಇನ್ನೊಂದು ವಸ್ತುವಿದ್ದರೆ ಅದರಿಂದ ಭಯವು ಸಂಭವಿಸೀತು. ಇನ್ನೊಂದು ವಸ್ತುವೇ ಇಲ್ಲದಾಗ ಬ್ರಹ್ಮವಿದನಿಗೆ ಯಾರಿಂದ ಭಯ ಹುಟ್ಟೀತು? ಇನ್ನೊಂದು ವಸ್ತುವಾದರೋ ಅವಿದ್ಯೆಯಿಂದ ಕಾಣಿಸುತ್ತದೆ. ಭಯಹೇತುವಾದ ಅವಿದ್ಯೆಯೇ ನಷ್ಟವಾದಾಗ ಭಯ ಇಲ್ಲದಿರುವುದು ಸಹಜವೇ ಆಗಿದೆ.

'ಯತೋ ವಾಚೋ ನಿವರ್ತಂತೇ' – ಎಂದು ಹೇಳುವ ಶ್ರುತಿಯ ಆಶಯವೇನೆಂದರೆ, ಬ್ರಹ್ಮವು ಯಾವ ಪದದ ಅರ್ಥವೂ ಅಲ್ಲ. ಯಾವ ವಾಕ್ಯದ ಅರ್ಥವೂ ಅಲ್ಲ ಎಂದು ತಿಳಿಸುವುದಕ್ಕಾಗಿ. ಅಲ್ಲದೆ ಯಾವ ಬಗೆಯ ಮಾನಸಕಲ್ಪನೆಗೂ ನಿಲುಕತಕ್ಕದ್ದಲ್ಲ ಎಂದು ತಿಳಿಸುವುದಕ್ಕಾಗಿ 'ಮನಸಾ ಸಹ' ಎಂದು ಹೇಳಿದೆ. 'ನಾಯಮಾತ್ಮಾ ಪ್ರವಚನೇನ ಲಭ್ಯಃ'(೧-೧-೨೩) ಎಂಬ ಕಠಶ್ರುತಿಯ ಆಶಯವೂ ಇದೇ ಆಗಿರುತ್ತದೆ. ಅಲ್ಲಿಯೇ 'ಯಮೇವೈಷ ವೃಣುತೇ ತೇನ ಲಭ್ಯಃ' ಎಂದೂ ಹೇಳಿದೆ. ಬ್ರಹ್ಮವು ಸ್ವಾನುಭವ ಸ್ವರೂಪವೆಂದು ಅದರ ತಾತ್ಪರ್ಯ. ಇದೇ ಪ್ರತ್ಯಗ್‌ಬ್ರಹ್ಮ. ಅನ್ನಮಯಾದಿ ಪಂಚಕೋಶಗಳ ನಿಷೇಧವೂ

ಇದರಲ್ಲಿಯೇ ಪರ್ಯವಸಾನಗೊಳ್ಳುತ್ತದೆ. ಹೇಗೆಂದರೆ, ಇದು ಅನ್ನಮಯ ಕೋಶವಲ್ಲ, ಇದು ಪ್ರಾಣಮಯ ಕೋಶವಲ್ಲ. ಇವೆಲ್ಲವೂ ಪ್ರತ್ಯಗ್‌ಬ್ರಹ್ಮವೇ ಎಂದು ಅರ್ಥ. ರಜ್ಜು ಸರ್ಪಸ್ಥಳದಲ್ಲಿ ಇದು ಸರ್ಪವಲ್ಲ, ಇದು ಹಗ್ಗ ಎಂದು ತಿಳಿಯುವಂತೆ ಕೋಶಪಂಚಕ ನಿಷೇಧದಲ್ಲಿಯೂ ತಿಳಿಯಬೇಕು.

## ಭೃಗುವಲ್ಲೀ

ವಿಶ್ವದಲ್ಲಿ ಅತ್ಯಧಿಕ ಮೌಲ್ಯವುಳ್ಳದ್ದು ಆತ್ಮಜ್ಞಾನ. ಅದನ್ನು ಪಡೆಯುವ ಇಚ್ಛೆಯಾಗುವುದು ಸಹ ಎಷ್ಟೋ ಜನ್ಮಗಳ ಪುಣ್ಯದ ಫಲ. ಇಚ್ಛೆಯಾದರೂ ಅದಕ್ಕಾಗಿ ಯತ್ನಿಸತಕ್ಕವರು ವಿರಳ. ವಿರಳರಲ್ಲಿಯೂ ಅದನ್ನು ಸಾಧಿಸಿ ಕೃತಕೃತ್ಯನಾಗತಕ್ಕವನು ಕೋಟಿಸಂಖ್ಯೆಯಲ್ಲಿ ಒಬ್ಬನಿದ್ದಾನು. ವೇದಾಂತಶಾಸ್ತ್ರದಲ್ಲಿ ಘನಪಾಂಡಿತ್ಯವನ್ನು ಗಳಿಸಿಕೊಂಡವರು ಅನೇಕರಿದ್ದಾರೆ. ಅದೆಲ್ಲವೂ ಶಾಸ್ತ್ರಗೋಷ್ಠಿಯಲ್ಲಿ ಪಂಡಿತರೊಡನೆ ವಿವಾದಕ್ಕಾಗಿ ತಲೆಯಲ್ಲಿ ನಿಂತಿರುತ್ತದೆ. ಹೃದಯಕ್ಕೆ ಇಳಿದಿರುವುದಿಲ್ಲ.

ಆತ್ಮಜ್ಞಾನದ ಪ್ರಾಪ್ತಿಗೆ ಮುಖ್ಯವಾಗಿ ಬೇಕಾದದ್ದು ಚಿತ್ತಶುದ್ಧಿ. ಇದು ಶಾಸ್ತ್ರವಿಹಿತಕರ್ಮವನ್ನು ಶ್ರದ್ಧಾಭಕ್ತಿಗಳಿಂದ ಆಚರಿಸಿದರೆ ಮಾತ್ರ ಲಭ್ಯವಾಗುತ್ತದೆ. 'ಚಿತ್ತಸ್ಯ ಶುದ್ಧಯೇ ಕರ್ಮ' ಎಂಬುದು ಶಾಸ್ತ್ರೀಯ ಸಿದ್ಧಾಂತ. ಯಾವ ಫಲದ ಅಪೇಕ್ಷೆಯೂ ಇಲ್ಲದೆ ಭಗವದರ್ಪಣ ಬುದ್ಧಿಯಿಂದ ಆಚರಿಸುವ ನಿಷ್ಕಾಮಕರ್ಮವೇ ಚಿತ್ತಶುದ್ಧಿಗೆ ಕಾರಣವಾಗುತ್ತದೆ. ಕಾಮ, ಕ್ರೋಧ, ದ್ವೇಷ, ಲೋಭಾದಿಗಳು ಚಿತ್ತಕ್ಕೆ ಅಂಟಿದ ಕೊಳೆ. ಈ ಕೊಳೆಯನ್ನು ನಿರ್ಮೂಲ ಮಾಡುವುದೇ ಚಿತ್ತಶುದ್ಧಿ. ಬ್ರಹ್ಮಜ್ಞಾನದ ಪ್ರಾಪ್ತಿಗೆ ಅರ್ಹತೆಯು ಚಿತ್ತ ಶುದ್ಧಿಯಿಂದ ಪ್ರಾಪ್ತವಾಗುವುದು.

ಈ ಪ್ರಕಾರದ ಚಿತ್ತಶುದ್ಧಿಯನ್ನು ಪಡೆದಿದ್ದ ಭೃಗುವು ಬ್ರಹ್ಮಜ್ಞಾನವನ್ನು ಪಡೆಯುವುದಕ್ಕಾಗಿ ತನ್ನ ತಂದೆಯಾದ ವರುಣನ ಬಳಿಗೆ ಬಂದು 'ಅಧೀಹಿ ಭಗವೋ ಬ್ರಹ್ಮ' ಎಂದು ಪ್ರಾರ್ಥಿಸುತ್ತಾನೆ. ಭಗವನ್, ಬ್ರಹ್ಮವೆಂದರೆ ಯಾವುದೆಂಬುದನ್ನು ತಿಳಿಸಿಕೊಡು ಎಂದು ಪ್ರಾರ್ಥಿಸುತ್ತಾನೆ. ಅಧೀಹಿ = ಅಧ್ಯಾಪಯ. 'ಅಂತರ್ಭಾವಿತಣಿಚ್'. ಇದು ವೈದಿಕ ಪ್ರಯೋಗ.

ಗುರುಮುಖದಿಂದಲೇ ಬ್ರಹ್ಮವಿದ್ಯೆಯನ್ನರಿಯಬೇಕು – ಎಂಬುದು ಭೃಗುವರುಣರ ಆಖ್ಯಾನದ ಉದ್ದೇಶವಾಗಿದೆ. ವರುಣನು ಅನ್ನಪ್ರಾಣಾದಿಗಳ ಚಿಂತನೆಯಿಂದ ಬ್ರಹ್ಮಸ್ವರೂಪದ ಅರಿವಾಗುವುದೆಂದನೇ ಹೊರತು ನೇರವಾಗಿ ಬ್ರಹ್ಮದ ಲಕ್ಷಣವನ್ನು ಹೇಳಲಿಲ್ಲ. ಬರಿಯ ಶ್ರವಣದಿಂದ ಅದರ

ಜ್ಞಾನವಾಗತಕ್ಕದ್ದಲ್ಲ. ಮನನದ ಅವಶ್ಯಕತೆ ಇದೆಯೆಂದು ತೋರಿಸಿಕೊಡುವುದೇ ಇದರ ಉದ್ದೇಶ. ವರುಣನು ಹೇಳಿದ ಅನ್ನಾದಿಗಳಲ್ಲಿ ಅನ್ನವು ಜಡ. ಪ್ರಾಣದಲ್ಲಿ ಕ್ರಿಯೆ ಉಂಟು. ಚಕ್ಷು, ಶ್ರೋತ್ರಗಳು ಜ್ಞಾನೇಂದ್ರಿಯಗಳು, ವಾಕ್ ಕರ್ಮೇಂದ್ರಿಯ, ಮನಸ್ಸು ಸಕಲವಿಧಜ್ಞಾನಗಳನ್ನು ಗ್ರಹಿಸತಕ್ಕದ್ದು. ಇವಿಷ್ಟನ್ನು ವಿಚಾರಮಾಡಿದರೆ ಸಾಕೆಂದು ವರುಣನ ಅಭಿಪ್ರಾಯ. ಇವುಗಳ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಮೂಲಕಾರಣವಾದದ್ದು ಬ್ರಹ್ಮ. ಇದನ್ನೇ 'ಜನ್ಮಾದ್ಯಸ್ಯ ಯತಃ' ಎಂಬ ಬಾದರಾಯಣ ಸೂತ್ರವು ಹೇಳಿದೆ. ಈ ಅನ್ನಾದಿಗಳೇ ಬ್ರಹ್ಮವೆಂದು ಜನರು ಭ್ರಾಂತರಾಗಿದ್ದಾರೆ. ಇವುಗಳ ಹೊರತು ಬ್ರಹ್ಮವೇ ಇಲ್ಲವೆಂದು ಹೇಳತಕ್ಕ ನಾಸ್ತಿಕರೂ ಇದ್ದಾರೆ. ಇವರೆಲ್ಲರೂ ಭ್ರಾಂತರೆಂದು ಭಗವತ್ಪಾದರು ಶ್ರೀ ದಕ್ಷಿಣಾಮೂರ್ತಿಸ್ತೋತ್ರದಲ್ಲಿ ಹೇಳಿದ್ದಾರೆ.

**ದೇಹಂ ಪ್ರಾಣಮಪೀಂದ್ರಿಯಾಣ್ಯಪಿ ಚಲಾಂ ಬುದ್ಧಿಂ ಚ ಶೂನ್ಯಂ ವಿದುಃ**
**ಸ್ತ್ರೀಬಾಲಾಂಧಜಡೋಪಮಾಸ್ತ್ವಹಮಿತಿ ಭ್ರಾಂತಾ ಭೃಶಂ ವಾದಿನಃ ॥**

ಅನ್ನಪ್ರಾಣಾದಿಗಳು ಈ ಜಗತ್ತಿನ ಎಲ್ಲ ಪ್ರಕಾರದ ವಸ್ತುಗಳನ್ನೂ ಪ್ರತಿನಿಧಿಸುತ್ತವೆ. ಇಲ್ಲಿ ತಪಸ್ಸೆಂದರೆ ಮನಸ್ಸು ಮತ್ತು ಇಂದ್ರಿಯಗಳನ್ನು ಏಕಾಗ್ರತೆಯಲ್ಲಿಟ್ಟು ಮಾಡುವ ಅಧ್ಯಾತ್ಮಿಕವಾದ ಚಿಂತನೆ.

ಅನ್ನಾದಿಗಳೆಲ್ಲವೂ ಕಡೆಗೆ ಬ್ರಹ್ಮದಲ್ಲಿ ಲಯವನ್ನು ಹೊಂದುತ್ತವೆ. ಯಾವ ಕ್ರಮದಲ್ಲಿ ನಾವು ಮೆಟ್ಟಿಲನ್ನು ಹತ್ತಿ ಮೇಲಕ್ಕೆ ಹೋಗುತ್ತೇವೋ ಅದಕ್ಕೆ ವ್ಯತ್ಯಯವಾದ ಕ್ರಮದಲ್ಲಿ ಇಳಿದು ಬರುತ್ತೇವೆ. ಸೂತ್ರಭಾಷ್ಯದಲ್ಲಿಯೂ ಈ ವಿಚಾರ ಬಂದಿದೆ. (ಸೂ.ಭಾ. ೨.೩.೧೪).

**ಜಗತ್ಪ್ರತಿಷ್ಠಾ ದೇವರ್ಷೇ ಪೃಥಿವ್ಯಪ್ಸು ಪ್ರಲೀಯತೇ ।**
**ಜ್ಯೋತಿಷ್ಯಾಪಃ ಪ್ರಲೀಯಂತೇ ಜ್ಯೋತಿರ್ವಾಯೌ ಪ್ರಲೀಯತೇ ॥**
**ವಾಯುಶ್ಚ ಲೀಯತೇ ವ್ಯೋಮ್ನಿ ತಚ್ಚಾವ್ಯಕ್ತೇ ಪ್ರಲೀಯತೇ ॥** ಈ ಶ್ಲೋಕವು ಮಹಾಭಾರತದ ಶಾಂತಿಪರ್ವದಲ್ಲಿ ಬಂದಿದೆ. (ಶಾಂತಿ ೩೩೯.೨೯)

'ಅನ್ನಂ ನ ನಿಂದ್ಯಾತ್ । ತದ್‌ವ್ರತಮ್' ಎಂಬ ವಾಕ್ಯದ ಅಭಿಪ್ರಾಯ ಹೀಗೆ – ವರುಣನು ಹೇಳಿದಂತೆ ಅನ್ನವನ್ನು ಮೊದಲು ವಿಮರ್ಶಿಸಿ ಭೃಗುವು ಮುಂದೆ ಹೋಗಿ ಆನಂದವೇ ಬ್ರಹ್ಮವೆಂದು ತಿಳಿದನು. ಈ ರೀತಿಯಲ್ಲಿ ಯಾರು ವಿಮರ್ಶಿಸುತ್ತ ಹೋಗುವರೋ ಅವರಿಗೂ ಬ್ರಹ್ಮಜ್ಞಾನವಾಗುತ್ತದೆ. ಆದ್ದರಿಂದ ಅನ್ನವು ಗುರುಸ್ಥಾನೀಯವಾದದ್ದು. ಗುರುವನ್ನು ನಿಂದಿಸಬಾರದು. ಈ ಪ್ರಕಾರವಾಗಿ ಶ್ರುತಿಯು ಲೋಕನೀತಿಯನ್ನೂ ಇಲ್ಲಿ ಬೋಧಿಸಿದೆ.

ವೇದಾಂತದ ಅಭ್ಯಾಸದಲ್ಲಿ ತೊಡಗಿದವರಿಗೆ ತೈತ್ತಿರೀಯ ಶಾಖೆಯ ಈ ಮೂರು ಉಪನಿಷತ್ತುಗಳು ಅತ್ಯಂತ ಉಪಯುಕ್ತವಾಗಿರುತ್ತವೆ. ಈ ಮೂರು ಉಪನಿಷತ್ತುಗಳಲ್ಲಿಯೂ ಭಾಷೆಯು ತುಂಬ ಸರಳವಾಗಿದೆ. ಸಂಸ್ಕೃತ ಭಾಷೆಯ ಸಾಮಾನ್ಯಜ್ಞಾನವಿದ್ದವರಿಗೆ ಇಲ್ಲಿರುವ ವಾಕ್ಯಗಳ ಅರ್ಥವು ಸುಲಭವಾಗಿ ತಿಳಿಯುತ್ತದೆ.

ಶೀಕ್ಷಾವಲ್ಲಿಯು ಗುರುಕುಲದಿಂದ ನಿರ್ಗಮಿಸುತ್ತಿರುವ ತರುಣ ಶಿಷ್ಯರಿಗೆ, ಈ ಕಾಲದಲ್ಲಿ ವಿಶ್ವವಿದ್ಯಾಲಯದವರು ಏರ್ಪಡಿಸುವ ದೀಕ್ಷಾಂತ ಭಾಷಣದಂತಿದೆ. ಹಿತೋಪದೇಶಗಳಿಂದ ಅರ್ಥಪುಷ್ಟವಾಗಿದ್ದು ಈ ಕಾಲದ ದೀಕ್ಷಾಂತ ಭಾಷಣವನ್ನು ಸರ್ವವಿಧದಲ್ಲಿಯೂ ಮೀರಿಸುವ ಸೌಭಾಗ್ಯ ಇದರಲ್ಲುಂಟು. ಸ್ವಾಧ್ಯಾಯಪ್ರವಚನಗಳಿಗೆ ಪ್ರಾಮುಖ್ಯವನ್ನಿತ್ತಿರುವುದು ಗಮನಾರ್ಹವಾದದ್ದು. ಆಸ್ತಿಕತೆಯನ್ನು ಉಳಿಸಿಕೊಂಡು ಪರಲೋಕದ ಕಡೆಗೆ ದೃಷ್ಟಿಯಿಟ್ಟು ಇಹಲೋಕದ ಬಾಳ್ವೆಯನ್ನು ಹೇಗೆ ಸಾಗಿಸಬೇಕೆಂಬುದನ್ನು ಬೋಧಿಸುವ ಈ ಉಪನಿಷತ್ತು ಸರ್ವರ ಆದರಣೆಗೂ ಪಾತ್ರವಾದದ್ದು.

ಹೀಗೆ ಉತ್ತಮವಾದ ಜೀವನವನ್ನು ಸಾಗಿಸಿದವರಿಗೆ ಪರಮಪುರುಷಾರ್ಥವಾದ ಮೋಕ್ಷದಲ್ಲಿ ಇಚ್ಛೆಯುಂಟಾಗುವುದು ಸಹಜ. ಆಗ ಬ್ರಹ್ಮಜಿಜ್ಞಾಸೆಯಲ್ಲಿ ತೊಡಗಿದವರಿಗೆ ಮೂರನೆಯ ಭೃಗುವಲ್ಲಿಯು ಮಾರ್ಗದರ್ಶನ ಮಾಡುತ್ತದೆ. ಆತ್ಮಜ್ಞಾನವನ್ನು ಗಳಿಸುವ ಉಪಾಯವನ್ನೂ ಆತ್ಮಜ್ಞಾನದಿಂದಾಗುವ ಫಲವನ್ನೂ ಮನೋಜ್ಞವಾಗಿ ಭೃಗುವಲ್ಲಿಯು ಚಿತ್ರಿಸಿದೆ.

ಈ ಎರಡು ಉಪನಿಷತ್ತುಗಳಿಗೂ ಮಧ್ಯವರ್ತಿಯಾದ ಬ್ರಹ್ಮವಲ್ಲಿಯು ಹೃದಯಸ್ಥಾನದಲ್ಲಿದೆ. ಉಳಿದೆರಡು ವಲ್ಲಿಗಳು ಎಡಗೈಬಲಗೈಗಳಂತೆ ವಿರಾಜಿಸುತ್ತವೆ. ಜಗತ್ತಿನ ಸೃಷ್ಟಿಕ್ರಮವನ್ನೂ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಪರಬ್ರಹ್ಮದ ಸ್ವರೂಪವನ್ನು ತಿಳಿಸಿಕೊಟ್ಟಿರುವುದು ಈ ಬ್ರಹ್ಮವಲ್ಲಿಯ ಒಂದು ವೈಶಿಷ್ಟ್ಯವೆನ್ನಬಹುದು. ಸಚ್ಚಿದಾನಂದ ಎಂಬ ರೂಢಿಯ ಶಬ್ದಕ್ಕೆ ಈ ಲಕ್ಷಣವೇ ಮೂಲವೆನ್ನಬಹುದು. ಬ್ರಹ್ಮಾನಂದವು ಎಷ್ಟು ದೊಡ್ಡದೆಂಬುದನ್ನು ಇಲ್ಲಿ ಬಹುಸುಂದರವಾಗಿ ವರ್ಣಿಸಲಾಗಿದೆ. ಅದರ ನೂರರಷ್ಟು, ಅದರ ನೂರರಷ್ಟು ಎಂದು ಮಕ್ಕಳಿಗೆ ತಿಳಿಸುವಂತೆ ತಿಳಿಸಿಕೊಟ್ಟಿದೆ. 'ಬ್ರಹ್ಮವು ಇಲ್ಲ ಎಂದು ತಿಳಿದವನು ತಾನೇ ಇಲ್ಲವಾಗಿ ಬಿಡುತ್ತಾನೆ' ಎಂಬ ನುಡಿಯು ನಾಸ್ತಿಕರಿಗೆ ಕಲಿಸುವ ಸೊಗಸಾದ ಪಾಠವಾಗಿದೆ.

ಈ ಬ್ರಹ್ಮವಲ್ಲಿಯು ಒಂದು ದೃಷ್ಟಿಯಿಂದ ಸುಲಭವೆನಿಸಿದರೂ ಪರಮಾರ್ಥವನ್ನು ಗ್ರಹಿಸುವಾಗ ಕಠಿಣವೂ ಆಗಿದೆ. 'ಅಸದ್ವಾ ಇದಮಗ್ರ ಆಸೀತ್'

ಎಂಬ ವಾಕ್ಯವು ಅನ್ಯೋನ್ಯ ವಿರುದ್ಧವಾಗಿ ಪ್ರತೀತವಾಗಿ ತಾತ್ಪರ್ಯವು ಕಠಿಣವೆನಿಸುತ್ತದೆ. ಅದರ ಮುಂದಿರುವ 'ತತೋ ವೈ ಸದಜಾಯತ' ಎಂಬುದು ಕಠಿಣತರವಾಗಿದೆ. 'ತದಾತ್ಮಾನಂ ಸ್ವಯಮಕುರುತ' ಎಂಬುದು ಕಠಿಣತಮವಾಗಿ ಬಿಡುತ್ತದೆ. ಒಟ್ಟಿನಲ್ಲಿ ಗುರುಮುಖದಿಂದಲೇ ವೇದಾರ್ಥವನ್ನು ತಿಳಿದು ಕೃತಕೃತ್ಯನಾಗಬೇಕು. ಪುಸ್ತಕಗಳು ಪ್ರವಾಹದಿಂದ ತುಂಬಿದ ಹೊಳೆಯನ್ನು ದಾಟಿಸುವ ದೋಣಿಗಳು. ಹುಟ್ಟುಹಾಕಿ ದೋಣಿಯನ್ನು ನಡೆಸಿ ಹೊಳೆದಾಟಿಸತಕ್ಕವನು ಸದ್ಗುರು ಒಬ್ಬನೇ.

ಮಾಂಡೂಕ್ಯೋಪನಿಷತ್ತು ಚಿಕ್ಕದಾದರೂ ಕಠಿಣ. ಈ ತೈತ್ತಿರೀಯತ್ರಯವು ಅದರ ಭಾಷ್ಯದಂತೆ ವಿಸ್ತಾರವಾದರೂ ಸುಲಭವೆನಿಸುತ್ತದೆ. ನಾನು ಬರೆದ ಮಾಂಡೂಕ್ಯಪ್ರವಚನವನ್ನೋದಿ ಆಯಾಸಪಟ್ಟವರು ಈ ಮೂರೆಳೆಯ ಮಲ್ಲಿಗೆಯ ಹಾರವನ್ನು ಧರಿಸಿ ಆಘ್ರಾಣಿಸಿ ಸಂತೋಷಿಸಲೆಂದು ತೈತ್ತಿರೀಯ ಪ್ರವಚನವನ್ನು ಬರೆದಿದ್ದೇನೆ. ಇದೆಲ್ಲವೂ ಸ್ವಬುದ್ಧಿ ಪರಿಶುದ್ಧಿಗಾಗಿ.

ಈ ಗ್ರಂಥವನ್ನು ಕೃಪೆಯಿಂದ ನೋಡಿ ಪರಿಶೀಲಿಸಿ ಅನುಗ್ರಹಿಸಿದ ಪರಮದಯಾಳುಗಳೂ ಪರಮಪೂಜ್ಯರೂ ಆದ ಶ್ರೀ ಶೃಂಗೇರಿ ಜಗದ್ಗುರು ಪೀಠದಲ್ಲಿ ವಿರಾಜಿಸುತ್ತಿರುವ ಶ್ರೀಶ್ರೀಶ್ರೀ ಜಗದ್ಗುರು ಭಾರತೀತೀರ್ಥ ಮಹಾಸ್ವಾಮಿಗಳವರ ಪವಿತ್ರ ಚರಣಗಳಿಗೆ ಸಾಷ್ಟಾಂಗ ಪ್ರಣಾಮಗಳನ್ನರ್ಪಿಸುತ್ತೇನೆ.

ಈ ಗ್ರಂಥದ ಹಸ್ತಪ್ರತಿಯನ್ನು ಅರ್ಪಿಸಿದಾಗ, ಅದನ್ನು ಕೃಪೆಯಿಟ್ಟು ಓದಿ, ಜಿಜ್ಞಾಸುಗಳಾದ ಭಕ್ತಜನರಿಗೆ ಉಪಯುಕ್ತವಾಗುವುದೆಂಬ ನಿಲುವನ್ನು ತಳೆದು, ಇದನ್ನು ಮುದ್ರಿಸಿ ಪ್ರಕಟಿಸುವಂತೆ **'ವೇದಾಂತಭಾರತೀ'** ಪ್ರಕಾಶನ ಸಂಸ್ಥೆಗೆ ಆಜ್ಞಾಪಿಸಿ ಅನುಗ್ರಹಿಸಿರುವ ಯಡತೊರೆ ಶ್ರೀಯೋಗಾನಂದೇಶ್ವರ ಮಠಾಧೀಶ್ವರರಾದ ಪರಮಪೂಜ್ಯ ಶ್ರೀಶ್ರೀ ಶಂಕರಭಾರತೀ ಮಹಾಸ್ವಾಮಿಗಳ ದಿವ್ಯಚರಣಗಳಿಗೆ ಸಾಷ್ಟಾಂಗ ಪ್ರಣಾಮಗಳನ್ನರ್ಪಿಸುತ್ತೇನೆ.

ಮುದ್ರಣಕಾಲದಲ್ಲಿ ಇದರ ಕರಡನ್ನು ಓದಿ ತಿದ್ದಿ ಶ್ರಮಿಸಿರುವ ವಿದ್ವಾನ್ ಜಿ. ಮಹಾಬಲೇಶ್ವರ ಭಟ್ಟರು, ಶ್ರೀಮತೀ ವಿದುಷೀ ವಿಜಯಲಕ್ಷ್ಮೀ ದಂಪತಿಗಳಿಗೆ ಭಗವಂತನು ಸರ್ವವಿಧ ಶ್ರೇಯಸ್ಸನ್ನು ಅನುಗ್ರಹಿಸಿ ಪಾಲಿಸುತ್ತಿರಲಿ ಎಂದು ಹಾರೈಸುತ್ತೇನೆ.

**ವಿದ್ವಾನ್ ಎನ್. ರಂಗನಾಥಶರ್ಮಾ**

# ನಿವೇದನೆ

ಅತೀಂದ್ರಿಯವಾದ ವಸ್ತುವಿನ ಜ್ಞಾನವು ಯಾವುದರಿಂದ ಆಗುವುದೋ ಅದು ವೇದ. ಇದು ಪರಮಾತ್ಮನಿಂದಲೇ ಪ್ರಕಾಶಗೊಂಡಿದೆ. 'ನಿಯತರಚನಾವತೋ ವಿದ್ಯಮಾನಸ್ಯೈವ ವೇದಸ್ಯ ಅಭಿವ್ಯಕ್ತಿಃ ಪುರುಷನಿಃಶ್ವಾಸವತ್, ನ ಚ ಪುರುಷಬುದ್ಧಿಪ್ರಯತ್ನಪೂರ್ವಕಃ।'(ಬೃ.ಉ.ಭಾ.2.4.10) ಆನುಪೂರ್ವೀವಿಶಿಷ್ಟವಾಗಿ ಮೊದಲೇ ಇದ್ದ ವೇದವು ಮನುಷ್ಯನ ನಿಶ್ವಾಸದಂತೆ, ಪರಮಾತ್ಮನಿಂದ ಅಭಿವ್ಯಕ್ತವಾಯಿತು. ವೇದವು ಅದಾವ ಪುರುಷಬುದ್ಧಿಪ್ರಯತ್ನದಿಂದ ರಚಿತವಾದದ್ದಲ್ಲ ಎಂಬುದಾಗಿ ಶ್ರೀ ಶಂಕರಭಗವತ್ಪಾದರು ಬೃಹದಾರಣ್ಯಕ ಭಾಷ್ಯದಲ್ಲಿ ತಿಳಿಸುತ್ತಾರೆ. ಈ ವೇದರಾಶಿಯನ್ನು ಋಷಿಗಳು ಅಂತರ್ದೃಷ್ಟಿಯಿಂದ ದರ್ಶನ ಪಡೆದು, ಗುರುಶಿಷ್ಯ ಪರಂಪರೆಯಿಂದ ಕ್ರಮವಾಗಿ ಸಂಪ್ರದಾಯವನ್ನು ಅನುಸರಿಸಿ ಪ್ರಕಾಶಪಡಿಸಿದರು. ಸರ್ವಭೂತಗಳ ಹಿತವನ್ನು ಬಯಸುವ ಭಗವಂತನು ದ್ವಾಪರಯುಗದಲ್ಲಿ ವೇದವ್ಯಾಸನಾಗಿ ಅವತರಿಸಿ ಒಂದೇ ಆದ ವೇದವನ್ನು ನಾಲ್ಕಾಗಿ ವಿಂಗಡಿಸಿ, ನೂರಾರು ಶಾಖೆಗಳನ್ನಾಗಿ ವಿಭಜಿಸಿ ಬೆಳೆಸಿದನೆಂದು ವಿಷ್ಣುಪುರಾಣವು ತಿಳಿಸುತ್ತದೆ.(3.57), ಅನಂತರ ವ್ಯಾಸಶಿಷ್ಯರಾದ ವೈಶಂಪಾಯನರು ಯಜುರ್ವೇದವನ್ನು 27 ಶಾಖೆಗಳನ್ನಾಗಿ ವಿಂಗಡಿಸಿ ತಮ್ಮ ಶಿಷ್ಯರಿಗೆ ಬೋಧಿಸಿದರು. ಅವರ ಶಿಷ್ಯರಲ್ಲಿ ಒಬ್ಬರಾದ ಯಾಜ್ಞವಲ್ಕ್ಯರು ಒಮ್ಮೆ ತಮ್ಮ ಗುರುಗಳ ಅವಕೃಪೆಗೆ ಪಾತ್ರರಾದಾಗ ಕಲಿತ ವೇದವನ್ನು ಕಕ್ಕಿದರು. ವೈಶಂಪಾನಯರ ಅನ್ಯಶಿಷ್ಯರು ತಿತ್ತಿರೀಪಕ್ಷಿಗಳ ರೂಪದಲ್ಲಿ ಅದನ್ನು ಸ್ವೀಕರಿಸಿದರು. ಅಲ್ಲಿಂದ ಆ ಯಜುಸ್ಸುಗಳು ತೈತ್ತಿರೀಯ ಎನಿಸಿದವು. (ವಿ.ಪು.5.12). ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿದ ತೈತ್ತಿರೀಯವು ಪ್ರತಿಪಾದಿಸುವ ವಿಷಯಗಳನ್ನವಲಂಬಿಸಿ ಸಂಹಿತಾ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳೆಂದು, ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡಗಳೆಂದು ಒಳಭೇದದಿಂದ ಕೂಡಿದೆ. ಬ್ರಹ್ಮವೊಂದೇ ಪರಮಾರ್ಥಸತ್ಯ, ಉಳಿದೆಲ್ಲವೂ ಮಿಥ್ಯೆ ಎಂಬುದು ವೇದದ ಅನುಶಾಸನ. ಸಕಲಸೃಷ್ಟಿಗೂ ಆದಿಕಾರಣನಾದ ಪರಮಾತ್ಮನನ್ನು ಅರಿಯುವುದೇ ಮೋಕ್ಷಕ್ಕೆ ಸಾಧನವೆಂದು ಸಕಲೋಪನಿಷತ್ತುಗಳ ಸಿದ್ಧಾಂತವಾಗಿದೆ. ಆದ್ದರಿಂದ ಉಪನಿಷತ್ತುಗಳಿಗೆ ಬ್ರಹ್ಮವಿದ್ಯೆಯೆಂಬ ಹೆಸರು ಬಂದಿದೆ.

ಮಿತ್ರ, ವರುಣಾದಿ ದೇವತೆಗಳನ್ನು ಪ್ರಾರ್ಥಿಸಿ, ಸಮಸ್ತ, ಕಲ್ಯಾಣವನ್ನು ಬಯಸುವ ಶಾಂತಿಮಂತ್ರದ ಮೂಲಕ ತತ್ತ್ವಜ್ಞಾನಕ್ಕೆ ಸಂಬಂಧಿಸಿದ ತೈತ್ತಿರೀಯೋಪನಿಷತ್ತು ಆರಂಭವಾಗುವುದು. ಇದರಲ್ಲಿ ಮೂರು ವಲ್ಲಿಗಳಿವೆ. ವರ್ಣೋಚ್ಚಾರದ ವಿಷಯವನ್ನು ನಿರೂಪಿಸುವುದರಿಂದ ಶೀಕ್ಷಾವಲ್ಲಿಯೆಂದೂ, ಆನಂದದ ಮೀಮಾಂಸೆಯನ್ನು ವಿವರವಾಗಿ ತಿಳಿಸುವುದರಿಂದ ಬ್ರಹ್ಮಾನಂದ ವಲ್ಲಿಯೆಂದೂ, ವರುಣನ ಪುತ್ರನಾದ ಭೃಗುವು ಪ್ರಶ್ನೋತ್ತರಗಳಿಂದ ಹಾಗೂ ತನ್ನ ತಪಸ್ಸಿನಿಂದ ಬ್ರಹ್ಮಜ್ಞಾನವನ್ನು ಹೊಂದಿದ ವರ್ಣನೆ ಇರುವುದರಿಂದ ಭೃಗುವಲ್ಲಿಯೆಂದೂ ಇವು ಪ್ರಸಿದ್ಧವಾಗಿವೆ. ನಾನಾ ಉಪಾಸನೆಗಳಿಂದ ಕೂಡಿದ ಈ ಉಪನಿಷತ್ತು ಸ್ವಾಧ್ಯಾಯ

ಪ್ರವಚನವಿಧಿಯ ಮಹತ್ತ್ವವನ್ನು ಒತ್ತಿಹೇಳುತ್ತದೆ. ಗುರುಕುಲದಲ್ಲಿ ಸಾಂಗ ವೇದಾಧ್ಯಯನವನ್ನು ಪೂರೈಸಿ ತನ್ನ ಮನೆಗೆ ಹೊರಡಲು ಉದ್ಯುಕ್ತನಾದ ಶಿಷ್ಯನಿಗೆ ಗುರುಗಳು ನೀಡುವ ಅನುಶಾಸನ ಹೀಗಿದೆ. ಸತ್ಯ, ಧರ್ಮ, ಸ್ವಾಧ್ಯಾಯಗಳನ್ನು ಎಂದೂ ಬಿಡಬಾರದು, ತಾಯಿ, ತಂದೆ, ಗುರು, ಅತಿಥಿಗಳನ್ನು ಸಾಕ್ಷಾತ್ ದೇವತೆಗಳೆಂದು ಪೂಜಿಸು ಇತ್ಯಾದಿ ಉಪದೇಶ ಇನ್ನಾವ ಉಪನಿಷತ್ತಿನಲ್ಲಿಯೂ ದೊರೆಯದು.

ಇಂತಹ ಗ್ರಂಥವನ್ನು ನಾಡಿನ ಶ್ರೇಷ್ಠವಿದ್ವಾಂಸರಾದ ಮಹಾಮಹೋಪಾಧ್ಯಾಯ ಎನ್. ರಂಗನಾಥಶರ್ಮಾರವರು ಶಾಂಕರ ಭಾಷ್ಯಾನುಸಾರವಾಗಿ ಶಾಸ್ತ್ರದ ಚೌಕಟ್ಟಿನಲ್ಲಿ ಸರಳವಾಗಿ ಕನ್ನಡದಲ್ಲಿ ಪ್ರವಚನರೂಪದಲ್ಲಿ ಬರೆದಿದ್ದಾರೆ. ಜ್ಞಾನವೃದ್ಧರೂ, ವಯೋವೃದ್ಧರೂ ಆದ ಶ್ರೀಯುತ ಶರ್ಮರು ಅನವರತ ತಮ್ಮನ್ನು ಲೇಖನಯಜ್ಞದಲ್ಲಿ ತೊಡಗಿಸಿಕೊಂಡಿರುತ್ತಾರೆ. ವೇದಾಂತಭಾರತಿಯ ಮೇಲೆ ಅವರಿಟ್ಟ ವಿಶ್ವಾಸ ಅಭಿಮಾನ ವಾತ್ಸಲ್ಯಕ್ಕೆ ನಾವು ಚಿರಋಣಿಗಳು. ಶ್ರೀಯುತರಿಗೆ ಹೃತ್ಪೂರ್ವಕ ವಂದನೆಗಳೊಂದಿಗೆ ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ.

ವೇದಾಂತಭಾರತಿಯ ಮಹಾಸಂರಕ್ಷಕರಾದ ದಕ್ಷಿಣಾಮ್ನಾಯ ಶೃಂಗೇರಿ ಶ್ರೀ ಶಾರದಾಪೀಠಾಧೀಶ್ವರರಾದ **ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳವರು** ಈ ಗ್ರಂಥಕ್ಕೆ ದಿವ್ಯ ಸಂದೇಶವನ್ನಿತ್ತು, ಅನುಗ್ರಹಿಸಿದ್ದಾರೆ ಪರಮಪೂಜ್ಯ ಜಗದ್ಗುರುಗಳ ಅಡಿದಾವರೆಗಳಲ್ಲಿ ಅನಂತ ಪ್ರಣಾಮಗಳು.

ಸಂಸ್ಥೆಯ ಎಲ್ಲ ಕಾರ್ಯಕಲಾಪಗಳಿಗೆ ಮಾರ್ಗದರ್ಶನವನ್ನು ನೀಡಿ ಆಶೀರ್ವದಿಸುತ್ತಿರುವವರು ಸಂಸ್ಥೆಯ ಸಂರಕ್ಷಕರಾದ ಯಡತೊರೆ ಶ್ರೀ ಯೋಗಾನಂದೇಶ್ವರ ಸರಸ್ವತೀ ಮಠದ ಪೀಠಾಧೀಶರಾದ **ಪರಮಪೂಜ್ಯ ಶ್ರೀ ಶ್ರೀ ಶಂಕರಭಾರತೀ ಮಹಾಸ್ವಾಮಿಗಳವರು.** ಶ್ರೀಮುಖವನ್ನು ನೀಡಿದ ಪರಮಪೂಜ್ಯರ ಚರಣಾರವಿಂದಗಳಲ್ಲಿ ಸಾಷ್ಟಾಂಗ ಪ್ರಣಾಮಗಳು.

ಈ ಗ್ರಂಥದ ಕರಡುಪ್ರತಿಯನ್ನು ಪರಿಶೀಲಿಸಿ ಅಕ್ಷರವಿನ್ಯಾಸದಲ್ಲಾದ ದೋಷಗಳನ್ನು ಸರಿಪಡಿಸಿಕೊಟ್ಟ ನಾಡಿನ ಪ್ರಸಿದ್ಧ ವ್ಯಾಕರಣವಿದ್ವಾಂಸರೂ, ರಂಗನಾಥಶರ್ಮರ ನೆಚ್ಚಿನ ಶಿಷ್ಯರೂ ಆದ ಶ್ರೀ ಜಿ. ಮಹಾಬಲೇಶ್ವರ ಭಟ್ಟರಿಗೂ ಹಾಗೂ ಅವರ ಪತ್ನಿಯಾದ ವಿದುಷೀ ಶ್ರೀಮತೀ ವಿಜಯಲಕ್ಷ್ಮೀ ಅವರಿಗೂ ಧನ್ಯವಾದಗಳು. ಈ ಗ್ರಂಥವನ್ನು ಮುದ್ರಿಸಿಕೊಟ್ಟ ಸ್ವ್ಯಾನ್ ಪ್ರಿಂಟ್‌ನ ಮಾಲಿಕರಾದ ಶ್ರೀಯುತ ನಾರಾಯಣರವರಿಗೆ ಕೃತಜ್ಞತೆಗಳು.

ಸರ್ವಜಿನ್ನಾಮ ಸಂ॥ದ ಚೈತ್ರ ಕೃಷ್ಣ<br>ಚತುರ್ದಶೀ ಸೋಮವಾಸರಃ<br>ದಿನಾಂಕ : 16-4-2007

**ಡಾ॥ ಶ್ರೀಧರ ಭಟ್ಟ ಐನಕೈ,**<br>ನಿರ್ದೇಶಕರು, ವೇದಾಂತಭಾರತೀ

ಶ್ರೀಃ

# ತೈತ್ತಿರೀಯೋಪನಿಷತ್ ಪ್ರವಚನ

ತೈತ್ತಿರೀಯೋಪನಿಷತ್ತುಗಳಲ್ಲಿ ಮೊದಲನೆಯದಾದ ಶೀಕ್ಷಾವಲ್ಲಿಯ ಭಾಷ್ಯವನ್ನು ಆರಂಭಿಸುವಾಗ ಶ್ರೀ ಶಂಕರಭಗವತ್ಪಾದರು ರಚಿಸಿರುವ ಮಂಗಳಶ್ಲೋಕವಿದು–

**ಯಸ್ಮಾಜ್ಜಾತಂ ಜಗತ್ಸರ್ವಂ ಯಸ್ಮಿನ್ನೇವ ಪ್ರಲೀಯತೇ ।**
**ಯೇನೇದಂ ಧಾರ್ಯತೇ ಚೈವ ತಸ್ಮೈ ಜ್ಞಾನಾತ್ಮನೇ ನಮಃ ॥**

ಈ ಸಮಸ್ತ ಜಗತ್ತು ಯಾರಿಂದ ಉತ್ಪನ್ನವಾಗಿದೆಯೋ ಯಾರಲ್ಲಿಯೇ ಇದು ವಿಲೀನವಾಗಿಬಿಡುತ್ತದೆಯೋ ಯಾರು ಇದನ್ನು ಧರಿಸಿ ಪೋಷಿಸುತ್ತಾರೋ ಅಂತಹ ಜ್ಞಾನಸ್ವರೂಪನಾದ ಪರಮಾತ್ಮನಿಗೆ ನಮಸ್ಕಾರ.

ಜ್ಞಾನಸ್ವರೂಪನಾದ ಪರಮಾತ್ಮನೆಂದರೆ ಪರಬ್ರಹ್ಮವೇ. ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದದ್ದು ಪರಬ್ರಹ್ಮ. ಅದು ಪರಬ್ರಹ್ಮದ ಸ್ವರೂಪವಲ್ಲ. ಆದ್ದರಿಂದ ಸೃಷ್ಟಿಸ್ಥಿತಿಲಯಗಳಿಗೆ ಕಾರಣವೇನೆನ್ನುವುದು ಪರಬ್ರಹ್ಮದ ತಟಸ್ಥಲಕ್ಷಣ. ಸ್ವರೂಪಲಕ್ಷಣವಲ್ಲ. **'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ'** ಎಂಬುದು ಸ್ವರೂಪಲಕ್ಷಣವಾಗುತ್ತದೆ. ಮಂಗಳಶ್ಲೋಕದಲ್ಲಿ ಜ್ಞಾನಾತ್ಮನೆಂಬುದು ಬ್ರಹ್ಮದ ಸ್ವರೂಪವಾದರೂ ಅದು ಲಕ್ಷಣದ ರೀತಿಯಲ್ಲಿ ಉಕ್ತವಾಗಿಲ್ಲ.

ಪರಬ್ರಹ್ಮವು ಅನಿರ್ವಚನೀಯವಾದ ಮಾಯೆಯನ್ನಾಶ್ರಯಿಸಿ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾಗುತ್ತದೆ. ಮಾಯೆಯಲ್ಲಿ ಸತ್ತ್ವ, ರಜಸ್ತಮಸ್ಸುಗಳೆಂಬ ಮೂರುಗುಣಗಳಿವೆ. ರಜೋಗುಣವನ್ನಾಶ್ರಯಿಸಿದಾಗ ಬ್ರಹ್ಮವೇ ಬ್ರಹ್ಮನೆಂಬ ಪುಲ್ಲಿಂಗವೆನಿಸಿ ಸೃಷ್ಟಿಕರ್ತೃವಾಗುತ್ತದೆ. ಸತ್ತ್ವಗುಣವನ್ನಾಶ್ರಯಿಸಿ ಜಗದ್ರಕ್ಷಣೆಮಾಡುವಾಗ ವಿಷ್ಣು, ತಮೋಗುಣವನ್ನಾಶ್ರಯಿಸಿ ಲಯಕರ್ತೃವಾದಾಗ ಹರನಾಗುತ್ತಾನೆ. ಈ ತ್ರಿಮೂರ್ತಿಗಳು ಬ್ರಹ್ಮದ ಮೂರು ಆಕೃತಿಗಳು. ಉಪನಿಷತ್ತುಗಳೆಲ್ಲವೂ ಏಕೇಶ್ವರವಾದವನ್ನೇ ಪ್ರತಿಪಾದಿಸುತ್ತವೆ.

ಇನ್ನೊಂದು ವಿಷಯ. ಬ್ರಹ್ಮಶಬ್ದವು ನಪುಂಸಕಲಿಂಗದಲ್ಲಿದ್ದಾಗ ಪರಬ್ರಹ್ಮವೆಂದು ಅದರ ಅರ್ಥ. ಪುಲ್ಲಿಂಗದಲ್ಲಿದ್ದಾಗ ಸೃಷ್ಟಿಕರ್ತನಾದ ಬ್ರಹ್ಮ ಎಂದರ್ಥ. ಪರಮಾತ್ಮ ಭಗವಂತ ಎಂಬ ಶಬ್ದಗಳು ಪ್ರಕರಣೋಚಿತವಾಗಿ ಪರಬ್ರಹ್ಮ ಎಂಬ ಅರ್ಥದಲ್ಲಿಯೂ ತ್ರಿಮೂರ್ತಿಗಳಲ್ಲೊಬ್ಬನೆಂಬ ಅರ್ಥದಲ್ಲಿಯೂ ಈ ಗ್ರಂಥದಲ್ಲಿ ಪ್ರಯುಕ್ತವಾಗಿದೆಯೆಂದು ತಿಳಿಯಬೇಕು.

ಉಪನಿಷತ್ ಎಂಬ ಶಬ್ದಕ್ಕೆ ಹಲವಾರು ಅರ್ಥಗಳನ್ನು ಹೇಳಿದ್ದಾರೆ. ಬ್ರಹ್ಮವಿದ್ಯೆ ಎಂಬುದು ಮುಖ್ಯವಾದ ಅರ್ಥ. ಅದನ್ನು ಪ್ರತಿಪಾದಿಸುವ ಗ್ರಂಥವೂ ಉಪನಿಷತ್ ಎಂದು ಪ್ರಸಿದ್ಧವಾಗಿದೆ.

ವೇದದಲ್ಲಿ ಕರ್ಮಕಾಂಡ ಜ್ಞಾನಕಾಂಡ ಎಂದು ಎರಡು ವಿಭಾಗಗಳುಂಟು. ಸಂಹಿತಾ, ಬ್ರಾಹ್ಮಣಗಳು ಕರ್ಮಕಾಂಡಕ್ಕೆ ಸೇರುತ್ತವೆ. ಉಪನಿಷತ್ತುಗಳು ಜ್ಞಾನಕಾಂಡಕ್ಕೆ ಸೇರಿದವು. ಇವುಗಳಲ್ಲಿ ಕರ್ಮಕಾಂಡವು ಮೊದಲನೆಯದು. ಕರ್ಮ-ಜ್ಞಾನಗಳಿಗಿರುವ ಸಂಬಂಧವಾದರೂ ಯಾವುದು? ಎಂಬ ಪ್ರಶ್ನೆ ಹುಟ್ಟುತ್ತದೆಯಾದ್ದರಿಂದ ಅದನ್ನೀಗ ವಿಚಾರಮಾಡುವುದು ಆವಶ್ಯಕ. ಸಂಕ್ಷೇಪವಾಗಿ ಇಷ್ಟು ಹೇಳಬಹುದು.

ಕರ್ಮವು ನಿತ್ಯ, ನೈಮಿತ್ತಿಕ, ಕಾಮ್ಯ- ಎಂದು ಮೂರು ವಿಧ. ಸಂಧ್ಯಾವಂದನೆ, ವೈಶ್ವದೇವ ಮೊದಲಾದವು ನಿತ್ಯಕರ್ಮಗಳು. ಇವುಗಳನ್ನಾಚರಿಸದಿದ್ದರೆ ದೋಷ ಉಂಟು. ಆಚರಿಸುತ್ತಿದ್ದರೆ ದುರಿತಕ್ಷಯದ್ವಾರಾ ಚಿತ್ತಶುದ್ಧಿಯನ್ನುಂಟುಮಾಡುತ್ತವೆ. ಗ್ರಹಣಕಾಲದಲ್ಲಿ ಸ್ನಾನ, ತರ್ಪಣ, ಮುಂತಾದವು ನೈಮಿತ್ತಿಕ ಕರ್ಮಗಳು. ಇವುಗಳನ್ನಾಚರಿಸದಿದ್ದರೆ ದೋಷ ಉಂಟು. ಆಚರಿಸಿದರೆ ಚಿತ್ತಶುದ್ಧಿಯೆಂಬ ಫಲವಿದೆ. ನೈಮಿತ್ತಿಕ ಕರ್ಮವು ನಿತ್ಯಕರ್ಮಗಳ ಗುಂಪಿಗೆ ಸೇರಿಹೋಗುತ್ತದೆ. ಫಲಾಪೇಕ್ಷೆಯಿಂದ ಮಾಡತಕ್ಕ ಜ್ಯೋತಿಷ್ಟೋಮಯಾಗ, ಪುತ್ರಕಾಮೇಷ್ಟಿ - ಮೊದಲಾದ ವೈದಿಕ ಕರ್ಮಗಳೂ ಸತ್ಯನಾರಾಯಣ ಪೂಜೆ ಮೊದಲಾದ ಪೌರಾಣಿಕ ಕರ್ಮಗಳೂ ಕಾಮ್ಯಕರ್ಮಗಳು. ಇವನ್ನಾಚರಿಸದಿದ್ದರೆ ದೋಷವೇನೂ ಇಲ್ಲ. ಆಚರಿಸಿದರೆ ಫಲ ಉಂಟು. ಇವಲ್ಲದೇ ವ್ಯವಹಾರದಲ್ಲಿ ಮಾಡುವ ಲೌಕಿಕ ಕರ್ಮಗಳೆಲ್ಲವೂ ಕಾಮ್ಯಕರ್ಮಗಳೇ. ಎಲ್ಲ ಕಾಮ್ಯಕರ್ಮಗಳನ್ನೂ ಲೌಕಿಕ ಕರ್ಮಗಳನ್ನೂ ಈಶ್ವರಾರ್ಪಣಬುದ್ಧಿಯಿಂದ ಫಲಾಪೇಕ್ಷೆ ಇಲ್ಲದೆ, ಲೋಕಸಂಗ್ರಹಕ್ಕಾಗಿ ಮಾಡುವುದರಿಂದ ದೋಷವಿಲ್ಲ. ಲೋಕಸಂಗ್ರಹವೆಂದರೆ ಜನರನ್ನು ತಪ್ಪುದಾರಿಗೆ ಹೋಗದಂತೆ ತಡೆಯುವುದು. ಸನ್ಮಾರ್ಗದಲ್ಲಿ ಹೋಗುವಂತೆ ಜನರನ್ನು ಪ್ರೇರಿಸುವುದು. ಮತ್ತು ಅನ್ಯರಿಗೆ ಆದರ್ಶವಾಗಿ ನಡೆದುಕೊಳ್ಳುವುದೂ ಲೋಕಸಂಗ್ರಹವೇ. ಹೀಗೆ ಶಾಸ್ತ್ರವಿಹಿತ ನಿತ್ಯಕರ್ಮಗಳನ್ನು ಆಚರಿಸುವುದ-ರಿಂದಲೂ ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಲೋಕಸಂಗ್ರಹಕ್ಕಾಗಿ ಇತರ ಕರ್ಮಗಳನ್ನು ಆಚರಿಸುವುದರಿಂದಲೂ ಚಿತ್ತಶುದ್ಧಿಯಾಗುತ್ತದೆ.

ಈ ಜನ್ಮದಲ್ಲಿಯೂ ಜನ್ಮಜನ್ಮಾಂತರಗಳಲ್ಲಿಯೂ ರಾಗದ್ವೇಷಗಳಿಗೆ ಒಳಗಾಗಿ ನಾವು ಮಾಡಿದ ಕರ್ಮಗಳಿಂದಲೂ ನಮಗೆ ದುರಿತವು

ಪ್ರಾಪ್ತವಾಗುತ್ತದೆ. ಕಾಮ, ಕ್ರೋಧ, ದ್ವೇಷ, ಅಸೂಯೆ – ಮುಂತಾದ ಸಂಸ್ಕಾರಗಳು ಚಿತ್ತಕ್ಕೆ (ಅಂತಃಕರಣಕ್ಕೆ) ಅಂಟಿಕೊಂಡಿರುತ್ತವೆ. ಇವೇ ಚಿತ್ತದ ಕೊಳೆಗಳು. ಈ ಕೊಳೆಗಳನ್ನು ಹೋಗಲಾಡಿಸಿಕೊಳ್ಳುವುದೇ ಚಿತ್ತಶುದ್ಧಿ. ಮುಮುಕ್ಷುವಾದವನು ಶ್ರದ್ಧಾಭಕ್ತಿಗಳಿಂದ ಪೂರ್ವೋಕ್ತರೀತಿಯಲ್ಲಿ ಮೊದಲು ಚಿತ್ತಶುದ್ಧಿಯನ್ನು ಗಳಿಸಿಕೊಳ್ಳಬೇಕು. ಏವಂ ಚ ಕರ್ಮಕಾಂಡವು ಚಿತ್ತಶುದ್ಧಿದ್ವಾರಾ ಬ್ರಹ್ಮವಿದ್ಯೆಗೆ ಸಾಧನವಾಗಿ ಉಪಕರಿಸುತ್ತದೆ. ಜ್ಞಾನಕಾಂಡವು ಸಾಧ್ಯವಾದ ಬ್ರಹ್ಮವಿದ್ಯೆಯನ್ನು ಗಳಿಸಿಕೊಡುತ್ತದೆ. ಆದ್ದರಿಂದ ಕರ್ಮಕಾಂಡ, ಜ್ಞಾನಕಾಂಡಗಳಿಗೆ ಸಾಧ್ಯಸಾಧನಭಾವಸಂಬಂಧವಿದೆ. ಈ ಸಂದರ್ಭದಲ್ಲಿ ಕರ್ಮದಿಂದಲೇ ಮೋಕ್ಷವಾಗುತ್ತದೆಯೆಂದೂ ಉಪನಿಷತ್ತುಗಳ ಆವಶ್ಯಕತೆಯಿಲ್ಲವೆಂದೂ ಹೇಳುವ ಮೀಮಾಂಸಕರ ಮತವನ್ನು ಶ್ರೀ ಶಂಕರಾಚಾರ್ಯರು ಭಾಷ್ಯದಲ್ಲಿ ವಿಸ್ತಾರವಾಗಿ ಖಂಡಿಸಿದ್ದಾರೆ.

# ೧. ಶೀಕ್ಷಾವಲ್ಲೀ

## ಪ್ರಥಮಾನುವಾಕ

### ಶಾಂತಿಪಾಠ

**ಓಂ ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಮ್ । ಅವತು ವಕ್ತಾರಮ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

'ಓಂ' ಎಂಬ ಶಬ್ದಕ್ಕೆ ಪ್ರಣವ ಎಂಬ ಹೆಸರಿದೆ. ಇದು ಪರಮಾತ್ಮನ ಪರಮಪವಿತ್ರವಾದ ನಾಮಧೇಯ. ಯೋಗ ಸೂತ್ರವು "ತಸ್ಯ ವಾಚಕಃ ಪ್ರಣವಃ" ಎಂದು ಹೇಳುತ್ತದೆ. ಪ್ರಣವವು ಈಶ್ವರನನ್ನು ಬೋಧಿಸುವ ಶಬ್ದ. ಸರ್ವಮಂತ್ರಗಳ ಆದಿಯಲ್ಲಿಯೂ 'ಓಂ' ಎಂದು ಪಠಿಸುವ ಪದ್ಧತಿಯುಂಟು. ಮಿತ್ರ, ವರುಣ – ಮೊದಲಾದ ದೇವತೆಗಳು ನಮಗೆ ಸುಖಕಾರಿಗಳಾಗಲಿ ಎಂಬ ಪ್ರಾರ್ಥನೆ ಆದಿಯಲ್ಲಿ ಬಂದಿದೆ. ಶಂ ನೋ ಮಿತ್ರಃ = ಮಿತ್ರದೇವನು, ನಃ = ನಮಗೆ, ಶಂ = ಸುಖಕಾರಿಯು, ಭವತು = ಆಗಲಿ ಎಂದರ್ಥ. 'ಶಂ' ಶಬ್ದಕ್ಕೆ ಸುಖ ಎಂದು ಅರ್ಥವಿದ್ದರೂ ಅನ್ವಯಾನುಸಾರವಾಗಿ ಇಲ್ಲಿ ಸುಖಕಾರಿಯೆಂದರ್ಥ.

ಈ ಉಪನಿಷತ್ತುಗಳಲ್ಲಿ ವಾಕ್ಯಗಳ ಅರ್ಥವು ಸುಲಭವಾಗಿರುವುದರಿಂದ ಪದಶಃ ಅರ್ಥವನ್ನು ಬರೆಯುವುದಿಲ್ಲ. ಸಾಮಾನ್ಯವಾದ ಸಂಸ್ಕೃತಜ್ಞಾನ-ವಿರತಕ್ಕವರೂ ಅರ್ಥವನ್ನು ಮಾಡಿಕೊಳ್ಳಬಹುದು. ಸುಲಭವಲ್ಲವೆಂಬ ಸ್ಥಳದಲ್ಲಿ ಮಾತ್ರ ಶಬ್ದಾರ್ಥವನ್ನು ತಿಳಿಸಿ ಅಲ್ಲಿರಬಹುದಾದ ಕ್ಲೇಶವನ್ನು ಬಿಡಿಸಲು ಪ್ರಯತ್ನಿಸಲಾಗುವುದು.

ಮಿತ್ರನು ಪ್ರಾಣವಾಯುವಿನ ವ್ಯಾಪಾರಕ್ಕೂ ಹಗಲಿಗೂ ಅಭಿಮಾನಿಯಾದ ದೇವತೆ. ವರುಣನು ಅಪಾನವಾಯುವಿನ ವ್ಯಾಪಾರಕ್ಕೂ ರಾತ್ರಿಗೂ ಅಭಿಮಾನಿಯಾದ ದೇವತೆ. ಅರ್ಯಮನೆಂದರೆ ಸೂರ್ಯ. ಈತನು ನೇತ್ರಕ್ಕೂ ಸೂರ್ಯಮಂಡಲಕ್ಕೂ ಅಧಿದೇವತೆ. ಆದ್ದರಿಂದ ಮಿತ್ರನೆಂದರೆ ಸೂರ್ಯನಿಗಿಂತ ಬೇರೆಯಾದ ಇನ್ನೊಬ್ಬ ದೇವತೆಯಾಗಿರಬಹುದು. ಮಿತ್ರ, ವರುಣ- ಎಂಬುವವರು ದೇವತಾದ್ವಂದ್ವಗಳಾಗಿ ಪ್ರಸಿದ್ಧರು. 'ಮಿತ್ರಾವರುಣೌ' ಎಂದು ದ್ವಂದ್ವಸಮಾಸ. "ದೇವತಾದ್ವಂದ್ವೇ ಚ"(೬-೩-೨೬) ಎಂಬ ಪಾಣಿನಿಸೂತ್ರದಿಂದ ಮಿತ್ರಶಬ್ದಕ್ಕೆ ಆನಙ್ ಆದೇಶ ಬಂದು ಅಕಾರವು ದೀರ್ಘವಾಗಿದೆ. ದೇಹಬಲಕ್ಕೆ ಇಂದ್ರನೂ, ವಾಕ್ ಮತ್ತು ಬುದ್ಧಿ ಇವುಗಳಿಗೆ ಬೃಹಸ್ಪತಿಯೂ ಅಧಿಪತಿಗಳು. ವಿಸ್ತೀರ್ಣವಾದ ಕಾರ್ಯಕ್ರಮಗಳುಳ್ಳ ವಿಷ್ಣುವು ಪಾದಗಳಿಗೆ ಅಭಿಮಾನಿ ದೇವತೆ.

ಇವರೆಲ್ಲರೂ ಅಧ್ಯಾತ್ಮದೇವತೆಗಳು. ಎಂದರೆ ನಮ್ಮ ಶರೀರಕ್ಕೆ ಸಂಬಂಧಿಸಿದ ಅಧಿದೇವತೆಗಳು. ವಿದ್ಯೆ, ಶ್ರವಣ, ಧಾರಣೆ, ಗುರುಸೇವೆ- ಮುಂತಾದ ಜ್ಞಾನೋಪಯೋಗಿ ಕಾರ್ಯಗಳು ನಮ್ಮಿಂದ ಸೂಕ್ತವಾದ ರೀತಿಯಲ್ಲಿ ನಡೆಯುವಂತೆ ಅನುಗ್ರಹಿಸಿ ಅಹೋರಾತ್ರವೂ ನಮ್ಮನ್ನು ಕಾಪಾಡುತ್ತಿರಲೆಂದು ಪ್ರಾರ್ಥಿಸುವುದು ಇಲ್ಲಿ ಉದ್ದಿಷ್ಟವಾಗಿದೆ.

ಬ್ರಹ್ಮವಿದ್ಯೆಯು ಅಪೇಕ್ಷಿತವಾದ್ದರಿಂದ ಈಗ ಬ್ರಹ್ಮಕ್ಕೆ ನಮಸ್ಕಾರವು ಸಲ್ಲಬೇಕು. ಬ್ರಹ್ಮವಾದರೋ ಮನೋವಾಕ್ಕುಗಳಿಗೆ ಅತೀತವಾದದ್ದು. ಅದನ್ನರಿಯುವುದಕ್ಕೆ ಮೊದಲು ಪ್ರತ್ಯಕ್ಷಬ್ರಹ್ಮವಾದ ವಾಯುವಿಗೆ ನಮಸ್ಕಾರವನ್ನು ಸಲ್ಲಿಸುವುದು ಯುಕ್ತ. ವಾಯುವಿನಲ್ಲಿರುವ ಸ್ಪರ್ಶಗುಣವು ನಮ್ಮ ತ್ವಗಿಂದ್ರಿಯಕ್ಕೆ ಗೋಚರವಾಗುವುದರಿಂದ ವಾಯುವು ಪ್ರತ್ಯಕ್ಷವೇ. ಸೂರ್ಯನಕ್ಷತ್ರಾದಿಗಳೂ ಪ್ರತ್ಯಕ್ಷಬ್ರಹ್ಮವೇ ಆದರೂ ವಾಯುವು ದೇಹದ ಒಳಗೆ ಹೊರಗೆ ಸರ್ವತ್ರ ಸದಾ ನೆಲೆಸಿರುವುದರಿಂದ ಅತ್ಯಂತ ನಿಕಟವರ್ತಿಯಾಗಿದ್ದಾನೆ. ಆದ್ದರಿಂದ ವಾಯುವು ಪ್ರಥಮೋಪಸ್ಥಿತ.

ಹೇ ವಾಯುವೇ! ನೀನು ಪ್ರತ್ಯಕ್ಷ ಬ್ರಹ್ಮವಾಗಿದ್ದೀಯೆ. ನಿನಗೆ ನಮಸ್ಕಾರ. ನಾನು ಹೇಳುವುದು ಬರಿಯ ಹೊಗಳಿಕೆಯಲ್ಲ. ನಾನು ಹೇಳುವುದು ಋತ. ಶಾಸ್ತ್ರಸಿದ್ಧವಾಗಿ ಬುದ್ಧಿಯಲ್ಲಿ ನಿಶ್ಚಿತವಾದದ್ದು ಋತ. ನಾನು ಹೇಳುವುದು ಸತ್ಯ. ನಂಬಿರುವುದನ್ನು ಆಚರಣೆಯಲ್ಲಿಯೂ ತಂದಾಗ ಋತವೇ ಸತ್ಯವೆನಿಸುತ್ತದೆ.

ವಾಯುಸ್ವರೂಪದಲ್ಲಿರುವ ಬ್ರಹ್ಮವು ವಿದ್ಯಾರ್ಥಿಯಾದ ನನ್ನನ್ನೂ ಈ ವಿಚಾರದಲ್ಲಿ ಹೇಳಿ ತಿಳಿಸಿಕೊಡುವ ಆಚಾರ್ಯನನ್ನೂ ಕಾಪಾಡಲಿ. ಕಾಪಾಡುವುದೆಂದರೆ ಇಲ್ಲಿ ಶಿಷ್ಯನಿಗೆ ವಿದ್ಯಾಪ್ರಾಪ್ತಿಯಾಗುವುದು. ಆಚಾರ್ಯನಿಗೆ ಉಪದೇಶಸಾಮರ್ಥ್ಯದ ಪ್ರಾಪ್ತಿಯಾಗುವುದು. ಅವತು ಎಂದು ಉಪನಿಷತ್ತು ಹೇಳಿದೆ. ರಕ್ಷತು ಎಂದೋ ಪಾಲಯತು ಎಂದೋ ಹೇಳಿಲ್ಲ. ಅವತು ಶಬ್ದದಲ್ಲಿರುವ ಅವ ಧಾತು ಬಹ್ವರ್ಥಗರ್ಭಿತವಾದ ಧಾತು. ಅವ = ರಕ್ಷಣ–ಗತಿ–ಕಾಂತಿ–ಪ್ರತೀತಿ–ತೃಪ್ತ್ಯವಗಮ–ಪ್ರವೇಶ–ಶ್ರವಣ–ಸ್ವಾಮ್ಯರ್ಥಯಾಚನಕ್ರಿಯೇಚ್ಛಾ–ದೀಪ್ತ್ಯವಾಪ್ತ್ಯಾಲಿಂಗನ–ಹಿಂಸಾದಾನ–ಭಾಗ–ವೃದ್ಧಿಷು. ವೇದವು ಲೌಕಿಕ ಕಾವ್ಯದಂತಲ್ಲ. ಗಂಭೀರವಾದ ಅರ್ಥವಿಶೇಷವನ್ನು ಒಳಗೊಂಡಿರುತ್ತದೆಯೆಂದು ತಿಳಿಯಬೇಕು.

ಕಡೆಯಲ್ಲಿ ಶಾಂತಿಃ ಶಾಂತಿಃ ಶಾಂತಿಃ ಎಂದು ಮೂರು ಸಲ ಹೇಳಿರುವು–ದೇಕೆಂದರೆ, ಆಧ್ಯಾತ್ಮಿಕ–ಆಧಿಭೌತಿಕ–ಆಧಿದೈವಿಕ ಎಂಬ ಮೂರುವಿಧವಾದ ವಿಘ್ನಗಳು ಬಾರದಿರಲಿ ಎಂದು.

ಆಧ್ಯಾತ್ಮಿಕ = ಇಲ್ಲಿ ಆತ್ಮವೆಂದರೆ ದೇಹವೆಂದರ್ಥ. ದೇಹಕ್ಕೆ ಬರುವ ಜ್ವರ, ತಲೆನೋವು ಮೊದಲಾದ ವಿಘ್ನಗಳು. ಆಧಿಭೌತಿಕ = ಹಾವು, ಚೇಳು, ಸೊಳ್ಳೆ – ಮುಂತಾದ ಪ್ರಾಣಿಗಳಿಂದ ಬರತಕ್ಕದ್ದು. ಆಧಿದೈವಿಕ = ಅತಿವೃಷ್ಟಿ, ದುರ್ಭಿಕ್ಷ ಮೊದಲಾದದ್ದು.

## ದ್ವಿತೀಯಾನುವಾಕ

**ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಃ ಸ್ವರಃ । ಮಾತ್ರಾ ಬಲಮ್ । ಸಾಮ ಸಂತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ ।**

ಶಿಕ್ಷಾ ಶಬ್ದದ ಇಕಾರಕ್ಕೆ ದೀರ್ಘಬಂದು 'ಶೀಕ್ಷಾ' ಎಂದಾಗಿದೆ. ಇದು ವೈದಿಕಪ್ರಯೋಗ. ಶಿಕ್ಷಾಶಾಸ್ತ್ರವು ಶಬ್ದದ ಸರಿಯಾದ ಉಚ್ಚಾರಣವಿಧಾನವನ್ನು ತಿಳಿಸುತ್ತದೆ. ಇದು ವೇದದ ಆರು ಅಂಗಗಳಲ್ಲೊಂದು.

ವೇದದಲ್ಲಿ ವರ್ಣಗಳನ್ನೂ ಉದಾತ್ತಾದಿ ಸ್ವರಗಳನ್ನೂ ಸರಿಯಾಗಿ ಸ್ಪಷ್ಟವಾಗಿ ಉಚ್ಚರಿಸಬೇಕು. ತಪ್ಪಿದರೆ ದೋಷ ಉಂಟು. ಅಲ್ಲದೆ ಅರ್ಥವು

ವ್ಯತ್ಯಾಸವಾಗಿ ಅನರ್ಥವು ಸಂಭವಿಸಿಬಿಡುತ್ತದೆ. ಸರಿಯಾದ ಉಚ್ಚಾರಣೆಯು ಎಲ್ಲ ಭಾಷೆಗಳಿಗೂ ಆವಶ್ಯಕ. ಶಿಕ್ಷ–ವಿದ್ಯೋಪಾದಾನೇ ಎಂಬ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. ಕನ್ನಡದಲ್ಲಿ ಶಿಕ್ಷಣ ಎಂಬ ಶಬ್ದವು ಸರಿಯಾದ ಅರ್ಥದಲ್ಲಿ ಬಳಕೆಯಾಗಿದೆ.[೧]

ವೇದಾಧ್ಯಯನ ಮಾಡುವಾಗ ಗುರುವು ಹೇಳಿದಂತೆ ಹೇಳಿ ಶಿಷ್ಯನು ವೇದಾಧ್ಯಯನವನ್ನು ಮುಗಿಸುತ್ತಾನೆ. ಅನಂತರ ಗುರುವು ಶಿಷ್ಯನಿಗೆ ಶಿಕ್ಷಾಶಾಸ್ತ್ರದ ಪ್ರಾಮುಖ್ಯವನ್ನು ತಿಳಿಸಿ ಅದನ್ನು ವಿವರಿಸುತ್ತಾನೆ. ಕರ್ಮಕಾಂಡವಾದಮೇಲೆ ಉಪನಿಷತ್ತುಗಳನ್ನು ಆರಂಭಿಸುವಾಗ ಶಿಕ್ಷಾವಿಚಾರವು ಬಂದಿದೆ. ಕರ್ಮಕಾಂಡದಲ್ಲಿ ಉಚ್ಚಾರಣೆಯು ತಪ್ಪಾದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬಹುದು. ಜ್ಞಾನಕಾಂಡದಲ್ಲಿ ಹಾಗಲ್ಲ. ಇಲ್ಲಿ ವೇದಾರ್ಥವು ಬಹಳ ಮುಖ್ಯವಾದದ್ದು. ತಪ್ಪು ಉಚ್ಚಾರಣೆಯಿಂದ ಅರ್ಥವನ್ನು ತಪ್ಪಾಗಿ ತಿಳಿದುಕೊಂಡರೆ ಅನರ್ಥವೇ ಸಂಭವಿಸುತ್ತದೆ. ಶಿಕ್ಷಾಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳೇನೆಂಬುದನ್ನು ಮಾತ್ರ ಈ ಉಪನಿಷತ್ತಿನಲ್ಲಿ ಸಂಕ್ಷೇಪವಾಗಿ ಸೂಚಿಸಲಾಗಿದೆ. ವಿಶೇಷವನ್ನು ಪಾಣಿನೀಯಶಿಕ್ಷಾ, ಶೌನಕಶಿಕ್ಷಾ ಮುಂತಾದ ಗ್ರಂಥಗಳಿಂದಲೂ ಆಯಾ ಶಾಖೆಗೆ ಸಂಬಂಧಿಸಿದ ಋಕ್‌ಪ್ರಾತಿಶಾಖ್ಯಮುಂತಾದ ಪ್ರಾತಿಶಾಖ್ಯಗ್ರಂಥಗಳಿಂದಲೂ ತಿಳಿದುಕೊಳ್ಳಬೇಕು.

ಅಕಾರ, ಇಕಾರ ಮುಂತಾದ ಅಕ್ಷರಗಳು ವರ್ಣಗಳು. ಉದಾತ್ತ, ಅನುದಾತ್ತ, ಸ್ವರಿತ – ಮೊದಲಾದವು ಸ್ವರಗಳು. ಹ್ರಸ್ವ, ದೀರ್ಘ, ಲಘು, ಗುರು ಮೊದಲಾದವು ಮಾತ್ರೆಗಳು. ಬಲವೆಂದರೆ ಪ್ರಯತ್ನ. ಅಕ್ಷರವನ್ನು ಉಚ್ಚರಿಸುವಾಗ ನಮ್ಮ ಒಂದು ಪ್ರಯತ್ನ ಬೇಕಾಗುತ್ತದೆ. ಬೇರೆ_ಬೇರೆ ಅಕ್ಷರಗಳಿಗೆ ವಿಭಿನ್ನಪ್ರಯತ್ನಗಳು ಉಚ್ಚಾರಣೆಗೆ ಬೇಕಾಗುತ್ತವೆ. ಇವು ಆಭ್ಯಂತರ ಪ್ರಯತ್ನ, ಬಾಹ್ಯ ಪ್ರಯತ್ನ ಎಂದು ಎರಡು ವಿಧ. ಇವುಗಳಲ್ಲಿಯೂ ಒಳಭೇದಗಳುಂಟು. ಆಭ್ಯಂತರ ಪ್ರಯತ್ನವು ನಾಲ್ಕುವಿಧ. ಬಾಹ್ಯಪ್ರಯತ್ನವು ಹನ್ನೊಂದುವಿಧ. ಸಾಮವೆಂದರೆ ಸಂಹಿತಾ. ಅಕ್ಷರಗಳನ್ನು ಎಡೆಬಿಡದೆ ಉಚ್ಚರಿಸುವುದೇ ಸಂಹಿತೆ. ಇಲ್ಲಿ ನಿರಂತರವಾಗಿ ಶಬ್ದದ ಅಕ್ಷರಗಳನ್ನು ಉಚ್ಚರಿಸಬೇಕು. ಎಲ್ಲಿ ಸ್ವಲ್ಪ ನಿಲ್ಲಿಸಬಹುದು ಎಂಬ ವ್ಯವಸ್ಥೆ ಇದೆ. ಉದಾಹರಣೆಗೆ 'ಉಪನಿಷತ್' ಇಲ್ಲಿರುವ

---

ಟಿಪ್ಪಣಿ ೧: ಕನ್ನಡದಲ್ಲಿ ದಂಡನೆಯೆಂಬ ಅರ್ಥದಲ್ಲಿ ಶಿಕ್ಷಾ ಶಬ್ದವನ್ನು ಬಳಸುತ್ತಾರೆ. ಉದಾ : ಅಪರಾಧಿಗೆ ಒಂದು ವರ್ಷ ಕಠಿಣಶಿಕ್ಷೆಯನ್ನು ವಿಧಿಸಲಾಯಿತು. ವಿಚಿತ್ರವಾದ ಆ ಅರ್ಥವು ಇಲ್ಲಿ ನಮಗೆ ವಿವಕ್ಷಿತವಲ್ಲ.

ಎಲ್ಲ ಅಕ್ಷರಗಳನ್ನೂ ಒಂದಾದ ಮೇಲೆ ಒಂದರಂತೆ ಹೇಳಬೇಕು. ಮಧ್ಯದಲ್ಲಿ ನಿಲ್ಲಿಸಿ ನಿಲ್ಲಿಸಿ ಉ-ಪ-ನಿ ಈ ಪ್ರಕಾರದಲ್ಲಿ ಹೇಳಬಾರದು. ಕೆಲವು ಕಡೆ ಸ್ವಲ್ಪ ವಿರಾಮವನ್ನು ಕೊಡಬೇಕಾಗುತ್ತದೆ. ಉದಾ:- ಅವನು/ಶಿಕ್ಷೋಪನಿಷತ್ತನ್ನು/ ಕಲಿಯುತ್ತಾನೆ. ಇಲ್ಲಿ ಗೆರೆ ಎಳೆದ ಕಡೆ ಒಂದು ಕ್ಷಣ ನಿಲ್ಲಿಸಬೇಕಾಗುತ್ತದೆ. ಲೋಕದಲ್ಲಿ ಮಾತಾಡುವುದೂ ಹೀಗೆಯೇ. ಇವಲ್ಲದೆ ಅಕ್ಷರಗಳ ಉಚ್ಚಾರಣೆಗೆ ಸ್ಥಾನಗಳುಂಟು. ಬಾಯಿಯಲ್ಲಿ ಎಲ್ಲ ಅಕ್ಷರಗಳನ್ನೂ ಉಚ್ಚರಿಸುತ್ತೇವಾದರೂ ಬಾಯಿಯಲ್ಲಿಯೇ ಬೇರೆ ಬೇರೆ ಸ್ಥಾನಗಳನ್ನು ಗೊತ್ತುಮಾಡಿದ್ದಾರೆ. ಹೇಗೆಂದರೆ, ಪ, ಫ, ಬ, ಭ, ಮ ಇವುಗಳಿಗೆ ಓಷ್ಠಗಳು (ತುಟಿಗಳು) ಸ್ಥಾನ. ಓಷ್ಠಗಳ ಸಹಾಯವಿಲ್ಲದೆ ಇದನ್ನು ಉಚ್ಚರಿಸಲಾಗುವುದಿಲ್ಲ. ತ, ಥ, ದ, ಧ, ನ ಇವುಗಳಿಗೆ ದಂತವು ಸ್ಥಾನ. ಇದೆಲ್ಲವನ್ನೂ ಶಿಕ್ಷಾಗ್ರಂಥಗಳಿಂದಲೂ ವ್ಯಾಕರಣಶಾಸ್ತ್ರಗಳಿಂದಲೂ ತಿಳಿದುಕೊಳ್ಳತಕ್ಕದ್ದು. ವೇದವನ್ನು ಸ್ಪಷ್ಟವಾಗಿ ಉಚ್ಚರಿಸಲು ಇವೆಲ್ಲವೂ ಉಪಕರಿಸುತ್ತವೆ. ವಸ್ತುತಃ ಲೋಕದಲ್ಲಿ ಸ್ಪಷ್ಟವಾಗಿ ಮಾತನಾಡುವುದಕ್ಕೂ ಇವೆಲ್ಲದರ ಜ್ಞಾನ ಆವಶ್ಯಕ.

## ತೃತೀಯಾನುವಾಕ

ಈ ಅನುವಾಕವು ದೊಡ್ಡದಾದ್ದರಿಂದ ಹತ್ತು ಹತ್ತು ವಾಕ್ಯಗಳಂತೆ ವಿಂಗಡಿಸಿಕೊಂಡು ಅರ್ಥವನ್ನು ವಿವರಿಸಲಾಗುವುದು. ಮುಂದಿನ ಅನುವಾಕಗಳಲ್ಲಿಯೂ ಈ ಕ್ರಮವನ್ನೇ ಅನುಸರಿಸಲಾಗಿದೆ.

**ಸಹ ನೌ ಯಶಃ । ಸಹ ನೌ ಬ್ರಹ್ಮವರ್ಚಸಮ್ । ಅಥಾತಃ ಸಗ್ಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಂಚಸ್ವಧಿಕರಣೇಷು । ಅಧಿಲೋಕಮಧಿಜ್ಯೋತಿಷಮಧಿವಿದ್ಯಮಧಿಪ್ರಜಮಧ್ಯಾತ್ಮಮ್ । ತಾ ಮಹಾ ಸಗ್ಂಹಿತಾ ಇತ್ಯಾಚಕ್ಷತೇ । ಅಥಾಧಿಲೋಕಮ್ । ಪೃಥಿವೀ ಪೂರ್ವರೂಪಮ್ । ದ್ಯೌರುತ್ತರರೂಪಮ್ । ಆಕಾಶಃ ಸಂಧಿಃ ॥೧॥**

ನನಗೂ ನನ್ನ ಆಚಾರ್ಯನಿಗೂ ಕೀರ್ತಿ ಮತ್ತು ಬ್ರಹ್ಮವರ್ಚಸ್ಸುಗಳು ಪ್ರಾಪ್ತವಾಗಲೆಂದು ಶಿಷ್ಯನು ಹಾರೈಸುತ್ತಾನೆ. ಆಚಾರ್ಯನು ಅವೆರಡನ್ನು ಪಡೆದು ಕೃತಾರ್ಥನಾಗಿರಬಹುದು. ಆದರೂ ಆತನ ಪ್ರಸನ್ನತೆಯನ್ನು ಗಳಿಸುವುದಕ್ಕಾಗಿ ಶಿಷ್ಯನ ಹೇಳಿಕೆ ಇದು. 'ಬ್ರಹ್ಮವರ್ಚಸ' ಎಂಬಲ್ಲಿ "ಬ್ರಹ್ಮಹಸ್ತಿಭ್ಯಾಂ ವರ್ಚಸಃ" (೫-೪-೭೮) ಎಂಬ ಪಾಣಿನಿಸೂತ್ರದಿಂದ ಸಮಾಸಾಂತದಲ್ಲಿ ಅಚ್‌ಪ್ರತ್ಯಯ ಬಂದು ಈ ಶಬ್ದವು ಅಕಾರಾಂತವಾಗಿದೆ.

ವೇದಾಧ್ಯಯನದಲ್ಲಿ ಸಂಹಿತೆಯ ಸ್ವರೂಪವನ್ನು ಸರಿಯಾಗಿ ತಿಳಿದು ಅದರಂತೆ ಉಚ್ಚರಿಸುವುದೇ ಮುಖ್ಯವಾದದ್ದು. ವರ್ಣಗಳ ಅತ್ಯಂತ ಸಾಮೀಪ್ಯವೇ ಸಂಹಿತೆ. 'ಸಂಹಿತಾಯಾ ಉಪನಿಷದಂ' ಎಂದರೆ ಸಂಹಿತೆಗೆ ಸಂಬಂಧಿಸಿದ ದರ್ಶನವನ್ನು ಎಂದರ್ಥ. ಸಂಹಿತೆಗೆ ಸಂಬಂಧಿಸಿದ ಕೆಲವು ವಸ್ತುಗಳ ಅರ್ಥವನ್ನಿಲ್ಲಿ 'ವ್ಯಾಖ್ಯಾಸ್ಯಾಮಃ' ತಿಳಿಸಿಕೊಡುತ್ತೇವೆ ಎಂದು ಅಭಿಪ್ರಾಯ. ಎಲ್ಲ ವೇದಗಳ ತಾತ್ಪರ್ಯಭೂಮಿಯಾದ ಬ್ರಹ್ಮವಸ್ತುವಿನ ವಿಚಾರವನ್ನು ಮುಂದೆ ತಿಳಿಸಬೇಕಾಗಿದೆ. ವೇದಾಧ್ಯಯನ ಮಾಡಿದವನು ಬರಿಯ ಶಬ್ದದ ಕಡೆಗೇ ಗಮನವನ್ನು ಕೊಟ್ಟಿರುತ್ತಾನೆ. ಥಟ್ಟನೆ ಉಪನಿಷತ್ತುಗಳ ಅರ್ಥವನ್ನು ಆತನು ಗ್ರಹಿಸಲಾರ. ಆತನ ಬುದ್ಧಿಯನ್ನೀಗ ಅರ್ಥದ ಕಡೆಗೆ ಹೊರಳಿಸಬೇಕಾಗಿದೆ. ಶಿಷ್ಯನು ಕಲಿತ ವೇದಕ್ಕೆ ಸಂಬಂಧಿಸಿದ ಸಂಹಿತೆಯ ವರ್ಣಗಳನ್ನು ಉಪಾಸನೆ ಮಾಡುವಂತೆ ಹೇಳುವುದು ಮತ್ತು ಅದಕ್ಕೆ ಸಂಬಂಧಿಸಿದ ಕೆಲವು ವಿಷಯಗಳ ಅರ್ಥದ ಕಡೆಗೆ ಶಿಷ್ಯನ ಗಮನವನ್ನು ಸೆಳೆಯುವುದು ಅರ್ಥಜಿಜ್ಞಾಸೆಯನ್ನು ಚೋದಿಸುವ ಮಾರ್ಗವಾಗಿರುತ್ತದೆ.

ಉಪಾಸನಾವಿಷಯಗಳು ಯಾವುವೆಂದರೆ ಲೋಕ, ಜ್ಯೋತಿ, ವಿದ್ಯಾ, ಪ್ರಜಾ, ಆತ್ಮ. ಇವು ಬಹುದೊಡ್ಡ ವಿಷಯಗಳಾದ್ದರಿಂದ ಮಹಾಸಂಹಿತೆಗಳು. ಇವನ್ನು ತಿಳಿದವನಿಗೆ ಬಹಳ ಪ್ರಯೋಜನಗಳಿವೆಯೆಂದು ಮುಂದೆ ಉಪನಿಷತ್ತೇ ತಿಳಿಸುವುದು. ಸಂಹಿತೆಗಳ ಜ್ಞಾನವೆಂದರೆ ಜ್ಞಾನಪೂರ್ವಕವಾದ ಧ್ಯಾನ. ಅದೇ ಉಪಾಸನೆ.

**ಅಥಾಧಿಲೋಕಮ್ । ಪೃಥಿವೀ ಪೂರ್ವರೂಪಮ್ ।** ಈ ಲೋಕದ ವಿಷಯದಲ್ಲಿ ಲೋಕರೂಪದಿಂದ ಉಪಾಸನೆ. ಪೂರ್ವರೂಪಂ=ಮುಂತಾದ ಸ್ಥಳಗಳಲ್ಲಿ ರೂಪವೆಂದರೆ ವೇದದಲ್ಲಿರುವ ವರ್ಣವೆಂದರ್ಥ. ಸಂಹಿತೆಯಲ್ಲಿ ವೇದದ ಪೂರ್ವವರ್ಣವು ಪೃಥಿವಿಯೆಂದು ಭಾವಿಸಬೇಕು. ಮುಂದಿನ ವರ್ಣವು ದ್ಯುಲೋಕವೆಂದು ತಿಳಿಯಬೇಕು. ಇವೆರಡೂ ಸಂಧಿಸುವ ಮಧ್ಯಭಾಗವು ಅಂತರಿಕ್ಷಲೋಕವೆಂದು ತಿಳಿಯತಕ್ಕದ್ದು.

**ವಾಯುಃ ಸಂಧಾನಮ್ । ಇತ್ಯಧಿಲೋಕಮ್ । ಅಥಾಧಿಜ್ಯೋತಿಷಮ್ । ಅಗ್ನಿಃ ಪೂರ್ವರೂಪಮ್ । ಆದಿತ್ಯ ಉತ್ತರರೂಪಮ್ । ಆಪಃ ಸಂಧಿಃ । ವೈದ್ಯುತಃ ಸಂಧಾನಮ್ । ಇತ್ಯಧಿಜ್ಯೋತಿಷಮ್ । ಅಥಾಧಿವಿದ್ಯಮ್ । ಆಚಾರ್ಯಃ ಪೂರ್ವರೂಪಮ್ ॥೨॥**

ಪೂರ್ವೋತ್ತರವರ್ಣಗಳನ್ನು ಯಾವುದು ಸೇರಿಸುತ್ತದೆಯೋ ಅದು

ಸಂಧಾನ. ಅಧಿಲೋಕದಲ್ಲಿ ಸಂಧಾನವನ್ನು ವಾಯುವೆಂದು ಭಾವಿಸಬೇಕು. ಒಂದು ಉದಾಹರಣೆ – 'ಇಷೇತ್ತ್ವಾ' ಇಲ್ಲಿ ಏಕಾರವು ಪೂರ್ವರೂಪ. ಇದು ಪೃಥಿವಿಯೆಂದು ತಿಳಿಯತಕ್ಕದ್ದು. ವಕಾರದ ಹಿಂದಿನ ತಕಾರವು ಉತ್ತರರೂಪ. ಇದು ದ್ಯುಲೋಕವೆಂದು ತಿಳಿಯಬೇಕು. ಈ ತಕಾರಕ್ಕೆ ದ್ವಿತ್ವ ಬಂದು ಎರಡು ತಕಾರಗಳಾಗಿವೆ. ಏಕಾರ ಮತ್ತು ಈ ತಕಾರದ ನಡುವೆ ಇರುವ ಸೂಕ್ಷ್ಮಕಾಲವು ಸಂಧಿ. ಇದೇ ಅಂತರಿಕ್ಷಲೋಕ. ದ್ವಿತ್ವದಿಂದ ಬಂದ ಮೊದಲನೆಯ ತಕಾರವು ಸಂಧಾನ. ಇದನ್ನು ವಾಯುವೆಂದು ಭಾವಿಸಬೇಕು.

ಹೀಗೆ ದ್ವಿತ್ವದಿಂದ ಬಂದ ತಕಾರವು ಸಂಧಾನವೆಂದು ವನಮಾಲಾ ಎಂಬ ಭಾಷ್ಯವ್ಯಾಖ್ಯಾನದಲ್ಲಿ ಬರೆದಿದ್ದಾರೆ. ಆದರೆ ದ್ವಿತ್ವಾದಿಗಳಿಂದ ಎಲ್ಲಿ ನೂತನವರ್ಣವು ಬಂದಿರುವುದಿಲ್ಲವೋ ಅಲ್ಲಿ ಯಾವುದು ಸಂಧಾನ? "ಪ್ರಜಯಾ ಪಶುಭಿಃ"–ಇಲ್ಲಿ ಯಾವುದು ಸಂಧಾನ? ಶ್ರೀ ಸುರೇಶ್ವರಾಚಾರ್ಯರ ಭಾಷ್ಯವಾರ್ತಿಕಗಳಿಗೆ ಬರೆದ ಆನಂದಗಿರಿಟೀಕೆಯಲ್ಲಿ "ಪೂರ್ವೋತ್ತರಾಕ್ಷರಯೋಃ ಸಂಬಂಧಹೇತುರ್ಯತ್ನವಿಶೇಷಃ ಸಂಧಾನಮ್"(೩-೭) ಎಂದು ಬರೆದಿದ್ದಾರೆ. ಈ ಯತ್ನ ವಿಶೇಷವೇ ಸಂಧಾನವೆನ್ನುವುದು ಯುಕ್ತ. ಸಂಹಿತೆಯಲ್ಲಿ ಈ ಯತ್ನವಿಶೇಷವನ್ನು ವಾಯುವೆಂದು ಧ್ಯಾನಿಸಬೇಕು.

ಇನ್ನು ಜ್ಯೋತಿಯ ವಿಷಯ. ಪೂರ್ವವರ್ಣವು ಅಗ್ನಿಯೆಂದೂ ಪರವರ್ಣವು ಆದಿತ್ಯನೆಂದೂ ಸಂಧಿಯೇ ಜಲವೆಂದೂ ಸಂಧಾನವು ವಿದ್ಯುತ್ ಎಂದೂ ತಿಳಿಯತಕ್ಕದ್ದು. ಇನ್ನು ವಿದ್ಯೆಯ ವಿಚಾರ. ಪೂರ್ವವರ್ಣವು ಆಚಾರ್ಯನೆಂದು ಭಾವಿಸತಕ್ಕದ್ದು.

**ಅಂತೇವಾಸ್ಯುತ್ತರರೂಪಮ್ । ವಿದ್ಯಾಸಂಧಿಃ । ಪ್ರವಚನಗ್‌ಂ ಸಂಧಾನಮ್ । ಇತ್ಯಧಿವಿದ್ಯಮ್ । ಅಥಾಧಿಪ್ರಜಮ್ । ಮಾತಾ–ಪೂರ್ವರೂಪಮ್ । ಪಿತೋತ್ತರರೂಪಮ್ । ಪ್ರಜಾಃಸಂಧಿಃ । ಪ್ರಜನನಗ್‌ಂ–ಸಂಧಾನಮ್ । ಇತ್ಯಧಿಪ್ರಜಮ್ ॥೩॥**

ಪರವರ್ಣವು ಶಿಷ್ಯನೆಂದು ತಿಳಿಯಬೇಕು. ಈ ಪ್ರಕಾರದಲ್ಲಿಯೇ ಮುಂದೆಯೂ ಅನ್ವಯಿಸಿಕೊಳ್ಳುವುದು ಸುಲಭ.

**ಅಥಾಧ್ಯಾತ್ಮಮ್ । ಅಧರಾಹನುಃ ಪೂರ್ವರೂಪಮ್ । ಉತ್ತರಾಹನುರುತ್ತರರೂಪಮ್ । ವಾಕ್ ಸಂಧಿಃ । ಜಿಹ್ವಾಸಂಧಾನಮ್ । ಇತ್ಯಧ್ಯಾತ್ಮಮ್ । ಇತೀಮಾ ಮಹಾಸಗ್‌ಂಹಿತಾಃ । ಯ ಏವಮೇತಾ**

**ಮಹಾಸಗ್ಂಹಿತಾ ವ್ಯಾಖ್ಯಾತಾ ವೇದ । ಸಂಧೀಯತೇ ಪ್ರಜಯಾ ಪಶುಭಿಃ । ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗೇಣ ಲೋಕೇನ ॥೪॥**

ಅಧ್ಯಾತ್ಮ ಶಬ್ದದಲ್ಲಿ ಆತ್ಮವೆಂದರೆ ದೇಹವೆಂದರ್ಥ. ದೇಹಾವಯವದ ಉಪಾಸನೆಯನ್ನಿಲ್ಲಿ ಹೇಳಲಾಗುವುದು. ಹನು ಎಂದರೆ ದವಡೆ. ಬಾಯಿ ತೆರೆದಾಗ ಅದರ ಕೆಳಗಿನ ಭಾಗ ಅಧರಾಹನು. ಮೇಲಿನ ಭಾಗ ಉತ್ತರಾಹನು. ಇವು ಐದು ಮಹಾಸಂಹಿತೆಗಳು. ವೇದಾಧ್ಯಯನವಾದ ಮೇಲೆ ಇವುಗಳ ಉಪಾಸನೆ ಮಾಡಬೇಕೆಂದು ಶಿಕ್ಷೋಪನಿಷತ್ತು ವಿಧಿಸುತ್ತದೆ. ಉಪಾಸನೆಯೆಂದರೆ ಶಾಸ್ತ್ರವಿಹಿತವಾದ ಒಂದು ಸದ್ವಿಷಯವನ್ನು, ಮಧ್ಯದಲ್ಲಿ ಇನ್ನೊಂದು ಆಲೋಚನೆ ಬಾರದಂತೆ ನಿರಂತರವಾಗಿ ಧ್ಯಾನಿಸುವುದು. ಈ ಉಪಾಸನೆಗಳನ್ನು ಮಾಡುವುದರಿಂದ ಸಂತಾನಲಾಭ, ಪಶುಲಾಭ, ಬ್ರಹ್ಮತೇಜಸ್ಸುಗಳು ಉಂಟಾಗುತ್ತವೆ. ಅನ್ನಾದಿ ಭೋಜ್ಯವಸ್ತುಗಳೂ ಸ್ವರ್ಗವೂ ಸಹ ಲಭಿಸುತ್ತವೆ. ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣ ಬುದ್ಧಿಯಿಂದ ಅನುಷ್ಠಾನಮಾಡಿದರೆ ಚಿತ್ತಶುದ್ಧಿದ್ವಾರಾ ಬ್ರಹ್ಮವಿದ್ಯೆಯ ಪ್ರಾಪ್ತಿಗೆ ಉಪಕರಿಸುತ್ತವೆಯೆಂದೂ ತಿಳಿಯಬೇಕು.

ಈ ಉಪಾಸನೆ ವಿಗ್ರಹಾರಾಧನೆ ಇದ್ದಂತೆ. ವಿಗ್ರಹವು ದೇವತೆಯ ಒಂದು ಪ್ರತೀಕ. ಸಾಲಿಗ್ರಾಮವನ್ನು ವಿಷ್ಣುವೆಂದೂ ಲಿಂಗವನ್ನು ಶಿವನೆಂದೂ ತಿಳಿದು ಪೂಜಿಸುವಂತೆ ಇದು. ವೇದದ ಒಂದೊಂದು ವರ್ಣದಲ್ಲಿಯೂ ಅವುಗಳ ಸಂಧಿಸಂಧಾನಗಳಲ್ಲಿಯೂ ಪೃಥಿವ್ಯಾದಿಬುದ್ಧಿಯನ್ನಿಟ್ಟು ಧ್ಯಾನಿಸಬೇಕೆಂದು ಉಪನಿಷತ್ತು ತಿಳಿಸಿದೆ. ವೇದಕ್ಕೆ ಸಂದಿರುವ ನಿರತಿಶಯವಾದ ಗೌರವ ಇದು. ತುಂಬ ಶ್ರದ್ಧೆಯಿಂದ ವೇದಾಧ್ಯಯನವನ್ನು ಮಾಡಬೇಕೆಂದೂ ಸ್ವರವರ್ಣಾದಿಗಳ ಉಚ್ಚಾರಣೆಯಲ್ಲಿ ಸ್ವಲ್ಪವೂ ದೋಷವು ಅಂಕುರಿಸದಂತೆ ನೋಡಿಕೊಳ್ಳಬೇಕೆಂದೂ ಈ ಉಪಾಸನಾಪ್ರಕಾರವು ವೇದಾಧ್ಯಾಯಿಗಳಿಗೆ ಎಚ್ಚರಿಸುತ್ತದೆ.

ಇದೇನೋ ಸರಿ. ಈ ರೀತಿಯಲ್ಲಿ ಉಪಾಸನೆ ಮಾಡುವ ಪದ್ಧತಿ ಹಿಂದೆ ಇತ್ತೆ. ಈಗ ಎಲ್ಲಾದರೂ ಇದೆಯೆ? ಎಂಬ ಶಂಕೆ ಹುಟ್ಟುತ್ತದೆ. ಮತ್ತು ಉಪಾಸನೆಯಲ್ಲಿ ಪ್ರತೀಕಕ್ಕಿಂತ ಉಪಾಸ್ಯದೇವತೆ ಪ್ರಧಾನವಾದದ್ದು.

ಈ ಮಹಾಸಂಹಿತೆಗಳಲ್ಲಿ ಪೂರ್ವವರ್ಣ, ಪರವರ್ಣ, ಸಂಧಿ – ನಡುವಿನ ಸೂಕ್ಷ್ಮಕಾಲ(ಛಿದ್ರ) ಯತ್ನವಿಶೇಷ – ಇವು ನಾಲ್ಕು ಪ್ರತೀಕಗಳೆನ್ನಬಹುದು. ಪಂಚಭೂತಗಳು, ವಿದ್ಯುತ್, ಕೆಳದವಡೆ, ಮೇಲ್ದವಡೆ ಮೊದಲಾದವು ಉಪಾಸ್ಯದೇವತೆಗಳಾಗಿವೆ. ಇದೇನು ವಿಚಿತ್ರ ! ಈ ಉಪಾಸ್ಯವಸ್ತುಗಳು ಪೂರ್ವೋಕ್ತವಾದ ಪುತ್ರಲಾಭ, ಧನಲಾಭ, ಬ್ರಹ್ಮವರ್ಚಸ್ಸು,

ಸ್ವರ್ಗ - ಮುಂತಾದ ಫಲಗಳನ್ನು ನೀಡಬಲ್ಲವೆ? ವೇದಾಧ್ಯಾಯಿಗೆ ಸಂಹಿತೆಯು ಪ್ರಧಾನವಾದಾಗ ಯಾವುದಾದರೂ ಒಂದು ಉಪಾಸನೆ ಸಾಕಾಗದೆ? ಪಂಚಮಹಾಸಂಹಿತೆಗಳ ಆವಶ್ಯಕತೆ ಉಂಟೆ? ಶ್ರದ್ಧಾಳುಗಳಾದ ವೈದಿಕರಿಗೆ ವಿಸ್ಮಯದ ವಸ್ತುವೇನೂ ಇಲ್ಲಿ ಕಾಣಿಸದಿದ್ದರೂ ಆಧುನಿಕ ವಿಚಾರಶೀಲರಿಗೆ ಇದು ಸಮಾಧಾನವನ್ನು ತರಲಾರದು.

ಈ ಐದು ವಿಷಯಗಳನ್ನು ಮಹಾಸಂಹಿತೆಗಳೆಂದೂ ಇವನ್ನು ತಿಳಿದವನಿಗೆ ಪ್ರಜಾಲಾಭ, ಪಶುಲಾಭ ಮುಂತಾದ ಶುಭಫಲಗಳು ದೊರೆಯುತ್ತವೆಯೆಂದೂ ಉಪನಿಷತ್ತು ಹೇಳಿದೆಯಲ್ಲದೆ ಈ ಮಹಾಸಂಹಿತೆಗಳಿಗೆ ಸಂಹಿತೋಪನಿಷತ್ತೆಂದು ನಾಮಕರಣ ಮಾಡಿದೆ. ಮತ್ತು ಯಾವಾತನು 'ಮಹಾಸಂಹಿತಾ ವ್ಯಾಖ್ಯಾತಾ ವೇದ' ಆತನಿಗೆ ಪ್ರಜಾಲಾಭಾದಿಗಳು ಫಲಗಳಾಗಿ ಲಭಿಸುತ್ತವೆ ಎಂದಿದೆ. ವೇದ ಎಂಬುದು 'ವಿದ-ಜ್ಞಾನೇ' ಎಂಬ ಧಾತುವಿನ ರೂಪ. ಇದು ಜ್ಞಾನಾರ್ಥಕ. ಉಪಾಸನಾಪ್ರಕರಣವಾದ್ದರಿಂದ ವೇದ ಎನ್ನುವುದು ಉಪಾಸನಾರ್ಥಕವೆಂದು ಭಾಷ್ಯಕಾರರು ಬರೆದಿದ್ದಾರೆ. ಅಲ್ಲದೇ ಈ ಸಂಹಿತಾದರ್ಶನವು ವೇದಾಧ್ಯಾಯಿಯ ಬುದ್ಧಿಯನ್ನು ಕ್ರಮವಾಗಿ ಅರ್ಥದಕಡೆಗೆ ಸೆಳೆಯುವುದಕ್ಕಾಗಿ ಪ್ರವೃತ್ತವಾಗಿದೆ ಎಂದೂ ಹೇಳಿದ್ದಾರೆ.

**"ಅತ್ಯರ್ಥಂ ಗ್ರಂಥಭಾವಿತಾ ಬುದ್ಧಿಃ ನ ಶಕ್ಯತೇ ಸಹಸಾ ಅರ್ಥಜ್ಞಾನ ವಿಷಯೇಽವತಾರಯಿತುಂ"** ಎಂಬುದು ಆಚಾರ್ಯರ ನುಡಿ.

ವೇದಾಧ್ಯಯನ ಮಾಡಿದವನು ವೇದಾರ್ಥವನ್ನು ಅವಶ್ಯವಾಗಿ ತಿಳಿದುಕೊಳ್ಳಲೇಬೇಕು. ಅವನು ವೇದಾಭ್ಯಾಸಜಡನಾಗಬಾರದು. ನಿರುಕ್ತದಲ್ಲಿ ಯಾಸ್ಕಮುನಿಗಳು ಈ ವಚನವನ್ನು ಉದಾಹರಿಸಿದ್ದಾರೆ.

**ಸ್ಥಾಣುರಯಂ ಭಾರಹಾರಃ ಕಿಲಾಭೂತ್**
**ಅಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್ ।**
**ಯೋಽರ್ಥಜ್ಞ ಇತ್ ಸಕಲಂ ಭದ್ರಮಶ್ನುತೇ**
**ನಾಕಮೇತಿ ಜ್ಞಾನವಿಧೂತಪಾಪ್ಮಾ ॥**

ತಾತ್ಪರ್ಯ : ಈತನು ವೇದಾಧ್ಯಯನವನ್ನು ಮಾಡಿ ಅದರ ಅರ್ಥವನ್ನು ತಿಳಿದುಕೊಳ್ಳದೆ, ಭಾರವನ್ನು ಹೊತ್ತ ಕಂಬವಾಗಿಬಿಟ್ಟಿದ್ದಾನೆ. ಯಾವಾತನು ವೇದಾರ್ಥವನ್ನು ಸರಿಯಾಗಿ ಬಲ್ಲನೋ ಆತನು ಸಕಲಶುಭಫಲಗಳನ್ನೂ ಪಡೆಯುತ್ತಾನಲ್ಲದೆ ಅರ್ಥಜ್ಞಾನದಿಂದ ಪಾಪವನ್ನು ಪರಿಹರಿಸಿಕೊಂಡು ಸ್ವರ್ಗಕ್ಕೆ ಹೋಗುತ್ತಾನೆ.

ಮಹಾಭಾರತದಲ್ಲಿ ವೇದವ್ಯಾಸರು ಈ ಅಭಿಪ್ರಾಯವನ್ನೇ ಭೀಮಸೇನನಿಂದ ಹೇಳಿಸಿದ್ದಾರೆ. ವನವಾಸದಲ್ಲಿದ್ದಾಗ ಒಂದು ಸಲ ಭೀಮನು "ನಾವು ಈಗಲೇ ಹಸ್ತಿನಾವತಿಗೆ ಹೋಗಿ ದುರ್ಯೋಧನಾದಿಗಳನ್ನು ಕೊಂದು ರಾಜ್ಯವನ್ನು ವಶಪಡಿಸಿಕೊಳ್ಳಬೇಕು" ಎಂದು ಅಣ್ಣನಾದ ಯುಧಿಷ್ಠಿರನಿಗೆ ಸಲಹೆ ಕೊಡುತ್ತಾನೆ. ಧರ್ಮರಾಯನು ಅದನ್ನು ಒಪ್ಪುವುದಿಲ್ಲ. ಆಗ ಭೀಮನು ಧರ್ಮರಾಯನಿಗೆ ಹೇಳುವ ಮಾತಿದು.

**ಛಾಂದಸಸ್ಯೇವ ತೇ ರಾಜನ್ ಮಂದಕಸ್ಯಾಲ್ಪಚೇತಸಃ ।**
**ಅನುವಾಕಹತಾ ಬುದ್ಧಿಃ ನೈಷಾ ತತ್ತ್ವಾರ್ಥದರ್ಶಿನೀ ॥**

ತಾತ್ಪರ್ಯ : ನೀನು ಮಂದಬುದ್ಧಿಯವನು. ನಿನ್ನ ಮನಸ್ಸು ದುರ್ಬಲವಾದದ್ದು. ವೇದವನ್ನು ಉರುಹಾಕಿಹಾಕಿ ಜಡ್ಡುಗಟ್ಟಿಹೋದ ವೈದಿಕನ ಬುದ್ಧಿಯಂತೆ ನಿನ್ನ ಬುದ್ಧಿ ಇದೆ. ಸೂಕ್ಷ್ಮಾರ್ಥವನ್ನು ವಿವೇಚಿಸುವ ಶಕ್ತಿಯನ್ನೇ ಅದು ಕಳೆದುಕೊಂಡಿದೆ.

ಮೇಲೆ ಉದಾಹರಿಸಿದ ಯಾಸ್ಕವಚನವು ಶಿಕ್ಷೋಪನಿಷತ್ತಿನ **"ಸಂಧೀಯತೇ ಪ್ರಜಯಾ......... ಲೋಕೇನ"** ಎಂಬ ಉಕ್ತಿಯ ಅನುರಣನದಂತಿದೆ-ಯೆಂಬುದನ್ನು ಗಮನಿಸಬೇಕು. ಈ ಪಂಚಮಹಾಸಂಹಿತೆಗಳನ್ನು ಉಪಾಸನೆಮಾಡಿದರೆ ವೈದಿಕನ ಬುದ್ಧಿಯು ಅರ್ಥದ ಕಡೆಗೆ ಹೇಗೆ ಹೊರಳುತ್ತದೆ ಎನ್ನುವುದೂ ವಿಚಾರಣೀಯವೇ. ಮುಂದೆ ಬ್ರಹ್ಮವಿದ್ಯೆಯ ವಿಷಯದಲ್ಲಿ ಗಭೀರಚಿಂತನೆಗಳನ್ನು ವಿಶೇಷವಾಗಿ ನಡೆಸಬೇಕಾಗಿರುವುದರಿಂದ ಸಾಮಾನ್ಯವಾದ ಈ ಲೌಕಿಕ ವಿಚಾರವನ್ನು ಶ್ರೀಶಂಕರಭಗವತ್ಪಾದರು ವಿವರಿಸಿಲ್ಲ. ಆ ಕಾರಣದಿಂದಲೇ ಶ್ರೀ ಸುರೇಶ್ವರರೂ ಅದನ್ನು ಉಪೇಕ್ಷಿಸಿದ್ದಾರೆ- ಎಂದು ನಮಗೆ ತೋರುತ್ತದೆ.

ಸಂಸಾರಿಗಳಾದ ದ್ವಿಜರಿಗೆ ಅವಶ್ಯವಾದಷ್ಟು ವೇದಾಧ್ಯಯನವು ಮುಗಿದಮೇಲೆ, ಆತ್ಮಜ್ಞಾನದ ವಿಚಾರವನ್ನಾರಂಭಿಸುವಾಗ ಈ ಶಿಕ್ಷೋಪನಿಷತ್ತು ಬಂದಿದೆ. ಉಪನಿಷತ್ತುಗಳಲ್ಲಿ ಹೇಳಿದ ಬ್ರಹ್ಮವಿದ್ಯೆಯು ಎಲ್ಲರ ಮೇಲೂ ಹೇರತಕ್ಕದ್ದಲ್ಲ. ಇದು ನಿವೃತ್ತಿಮಾರ್ಗ. ಪ್ರವೃತ್ತಿಮಾರ್ಗವಲ್ಲ. ಪ್ರವೃತ್ತಿಮಾರ್ಗವಾದ ಕರ್ಮಕಾಂಡದಲ್ಲಿ ಆಸಕ್ತರಾಗತಕ್ಕವರು ಅಧಿಕ. ನಿವೃತ್ತಿಯನ್ನು ಬಯಸತಕ್ಕವರು ವಿರಳ. 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ'(ಗೀತಾ-೭-೩) ಎಂದು ಭಗವಂತನೇ ಹೇಳಿದ್ದಾನೆ. ಆದ್ದರಿಂದಲೇ ಈ ಉಪನಿಷತ್ತಿನಲ್ಲಿ ವೇದಾಧ್ಯಯನವನ್ನು ಮುಗಿಸಿ ತಮ್ಮ ಮನೆಗಳಿಗೆ ತೆರಳಲಿರುವ ಶಿಷ್ಯರಿಗೆ

ಆಚಾರ್ಯನು ಕೆಲವು ಹಿತವಚನಗಳನ್ನು ಬೋಧಿಸಿ ಬೀಳ್ಕೊಡುವ ಪ್ರಕಾರವನ್ನು ವರ್ಣಿಸಲಾಗಿದೆ.

**ವೇದಮನೂಚ್ಯಾಚಾರ್ಯೋಽಂತೇವಾಸಿನಮನುಶಾಸ್ತಿ । ಸತ್ಯಂ ವದ । ಧರ್ಮಂ ಚರ । .........ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ । .... ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ಮಾತೃದೇವೋ ಭವ । ಪಿತೃದೇವೋ ಭವ । ........... ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ ......।** ಇವೇ ಮೊದಲಾದ ಆದೇಶೋಪದೇಶಗಳು ಪ್ರವೃತ್ತಿಮಾರ್ಗದ ಕರ್ಮಠರಿಗೆ ಎಂಬುದು ಸ್ಫುಟವಾಗಿದೆ. ಪ್ರವೃತ್ತಿ-ನಿವೃತ್ತಿಗಳಿಗಿರುವ ಭೇದವು ಮುಂದೆ ಇದೇ ಅನುವಾಕದ ಭಾಷ್ಯದಲ್ಲಿ ವಿಸ್ತೃತವಾಗಿ ವಿವೇಚಿಸಲ್ಪಟ್ಟಿದೆ. ಶಿಷ್ಯನು ಕಾಲಾಂತರದಲ್ಲಿ ಆತ್ಮಜ್ಞಾನವನ್ನು ಪಡೆದು ಕೃತಕೃತ್ಯನಾಗಲಿ ಎಂಬ ಸದುದ್ದೇಶದಿಂದ ಆತ್ಮಜ್ಞಾನಸ್ವರೂಪವನ್ನು ಆತ್ಮಜ್ಞಾನದ ಫಲವನ್ನು ಕೆಲವೇ ಮಾತುಗಳಿಂದ ನಿರೂಪಿಸಿ ಅದರಲ್ಲಿ ಅಭಿರುಚಿಯನ್ನು ಹುಟ್ಟಿಸುವ ಪ್ರಯತ್ನವೂ ಇಲ್ಲಿ ನಡೆದಿದೆ.

ಶೀಕ್ಷಾಂ ವ್ಯಾಖ್ಯಾಸ್ಯಾಮಃ - ಎಂದು ಹೇಳಿ ವರ್ಣ, ಸ್ವರ, ಮಾತ್ರಾ, ಬಲ, ಸಾಮ, ಸಂತಾನ - ಎಂದು ಆರು ಪದಗಳನ್ನು ಉಚ್ಚರಿಸಿದರೆ ಶಿಕ್ಷಾಶಾಸ್ತ್ರವು ಮುಗಿದುಹೋಗುತ್ತದೆಯೆ? ವಾಗುಚ್ಚಾರಣವಿಧಿಯಲ್ಲಿ ಅವು ಮುಖ್ಯವಿಷಯಗಳು ಅದನ್ನು ಸರಿಯಾಗಿ ಅರಿತುಕೊಳ್ಳಬೇಕು. ಎಂಬುದರ ಸೂಚನೆ ಅದು. ಅವನ್ನು ಅರಿತುಕೊಳ್ಳಲು ಶಿಕ್ಷಾಗ್ರಂಥಗಳನ್ನೂ ಪ್ರಾತಿಶಾಖ್ಯಗಳನ್ನೂ ಅಧ್ಯಯನಮಾಡಬೇಕು. ಶಿಕ್ಷಾಶಬ್ದವು ಇತರ ವೇದಾಂಗಗಳಿಗೆ ಉಪಲಕ್ಷಣ.

**ಶಿಕ್ಷಾ ವ್ಯಾಕರಣಂ ಛಂದೋ ನಿರುಕ್ತಂ ಜ್ಯೌತಿಷಂ ತಥಾ ।**
**ಕಲ್ಪಶ್ಚೇತಿ ಷಡಂಗಾನಿ ವೇದಸ್ಯಾಹುರ್ಮನೀಷಿಣಃ ॥**

ಇವುಗಳಲ್ಲಿ ಶಿಕ್ಷೆಯು ವೇದೋಚ್ಚಾರಣೆಗೂ ವ್ಯಾಕರಣನಿರುಕ್ತಗಳು ವೇದಾರ್ಥಜ್ಞಾನಕ್ಕೂ ಉಳಿದವು ವೇದೋಕ್ತ ಕರ್ಮಾನುಷ್ಠಾನಗಳಿಗೂ ಉಪಯುಕ್ತವಾಗುತ್ತವೆ.

ಇದೇ ರೀತಿಯಲ್ಲಿ ಗುರುಕುಲದ ಅಂತೇವಾಸಿಗಳಿಗೆ ಪಂಚಮಹಾಸಂಹಿತೆಗಳು ಒಂದು ಮಾರ್ಗದರ್ಶನವನ್ನೀಯುತ್ತವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ತ್ರಿವರ್ಣದವರು ವೇದಾಧಿಕಾರಿಗಳು. ಇನ್ನು ನಾಲ್ಕನೆಯ ವರ್ಣದವನಾದ ಶೂದ್ರನಿಗೆ ವೇದವನ್ನುಳಿದು ಇತರ ವಿದ್ಯೆಗಳನ್ನು ಕಲಿಯಲು ಅಧಿಕಾರವಿತ್ತೆಂದು ತೋರುತ್ತದೆ. "ಸರ್ವೇಷಾಮಪ್ಯಧಿಕಾರೋ ವಿದ್ಯಾಯಾಮ್" ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ.

ಅದು ಹೇಗಾದರೂ ಇರಲಿ. ಎಲ್ಲ ಜನರಿಗೂ ಅವರವರ ಅಧಿಕಾರಯೋಗ್ಯತೆಗಳಿಗೆ ತಕ್ಕಂತೆ ಹಿತವನ್ನು ಬೋಧಿಸಿ ಶ್ರೇಯೋಮಾರ್ಗದ ಕಡೆಗೆ ಕೈತೋರಿಸುವುದು ವೇದಗಳ ಉದ್ದೇಶವಾಗಿರುತ್ತದೆ.

ಪ್ರವೃತ್ತಿಮಾರ್ಗದವರೆಲ್ಲರೂ ಲೋಕವ್ಯವಹಾರದಲ್ಲಿ ತೊಡಗಿರ-ಬೇಕಾಗಿರುವುದರಿಂದ, ವ್ಯವಹಾರಕ್ಕೆ ಸಂಬಂಧಿಸಿದ ಸಾಮಾನ್ಯಜ್ಞಾನವೂ ಅವರವರ ವೃತ್ತಿಗೆ ಸಂಬಂಧಿಸಿದ ವಿಶೇಷಜ್ಞಾನವೂ ಅತ್ಯಾವಶ್ಯಕವೆಂಬುದು ಸರ್ವವಿದಿತ. ಅದಕ್ಕಾಗಿ ಮಾರ್ಗದರ್ಶನವನ್ನು ಮಾಡಲು ಈ ಮಹಾಸಂಹಿತೆಗಳು ಉದ್ಯುಕ್ತವಾಗಿವೆ. ಉಪಾಸನೆಯಲ್ಲಿ ಪ್ರತೀಕವು ಗೌಣವಾದದ್ದು. ಉಪಾಸ್ಯದೇವತೆಯ ಗುಣರೂಪಮಹಿಮೆಗಳು ಮುಖ್ಯವಾಗಿ ಧ್ಯೇಯವಾಗಿರುತ್ತವೆ. ಹಾಗೆ ಇಲ್ಲಿಯೂ ವರ್ಣಸಂಧಿಸಂಧಾನಗಳು ಗೌಣವಾದವು. ಧ್ಯೇಯಗಳಾದ ಲೋಕ, ಅಗ್ನಿ, ಆದಿತ್ಯಾದಿಗಳು ಮುಖ್ಯವಾದವು.

ಮೊದಲು ಅಧಿಲೋಕ, ಅದರಲ್ಲಿಯೂ ಆದ್ಯವಾದದ್ದು ಪೃಥ್ವಿ-ಭೂಲೋಕ. ಇಲ್ಲಿರುವ ಗಿರಿನದೀವನಾದಿಗಳ ವೀಕ್ಷಣೆ. ಮನುಷ್ಯ, ಮೃಗ, ಪಕ್ಷಿ, ಕ್ರಿಮಿ, ಕೀಟಾದಿಗಳ ನಿರೀಕ್ಷಣೆ, ಜನರ ಗುಣಸ್ವಭಾವಾದಿಗಳ ಪರೀಕ್ಷಣೆ – ಮುಂತಾದವನ್ನು ಸಾಕಷ್ಟು ತಿಳಿದು ಅರ್ಥಮಾಡಿಕೊಳ್ಳಬೇಕು. ಹಾಗೆಯೇ ಗ್ರಹ, ನಕ್ಷತ್ರಾದಿಗಳಿಗಿರುವ ದ್ಯುಲೋಕ, ಆಕಾಶ, ಸರ್ವತ್ರ ಸಂಚರಿಸುವ ಗಾಳಿ – ಇವುಗಳ ಅರಿವೂ ಮನುಷ್ಯನಿಗೆ ಬೇಕು. ಹಾಗೆಯೇ ಅಗ್ನಿ, ಆದಿತ್ಯ, ಮೋಡದಿಂದ ಸುರಿಯುವ ಜಲ, ಮಿಂಚು – ಇವನ್ನು ಗಮನಿಸಬೇಕು. ವಿದ್ಯಾಭ್ಯಾಸಕ್ಕಾಗಿ ಗುರು, ಶಿಷ್ಯ, ಪ್ರವಚನಗಳು ಅತ್ಯಾವಶ್ಯಕ. ಗುರುಕುಲಪದ್ಧತಿಯನ್ನು ಹೀಗೆಯೇ ಮುಂದುವರಿಸಬೇಕು. **"ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ"** ಜಗತ್ತು ಹೀಗೆಯೇ ಮುಂದುವರಿಯುತ್ತದೆ. ಮುಂದುವರಿಯಲೆಂಬುದೇ ಭಗವಂತನ ಇಚ್ಛೆಯಾಗಿರುತ್ತದೆ. ಆದ್ದರಿಂದ ಪ್ರಜಾತಂತುವಿಗೆ ವಿಚ್ಛೇದನವನ್ನು ತರಬೇಡ. ತಾಯಿ, ತಂದೆ, ಪ್ರಜೆ, ಪ್ರಜನನ ಇವು ಸಕಲಪ್ರಾಣಿಗಳಲ್ಲಿಯೂ ಇವೆ. ಪ್ರಕೃತಿಗೆ ಅನುಗುಣವಾಗಿ ಅವುಗಳ ಸಂತತಿ ಮುಂದುವರಿಯುತ್ತದೆ. ಮನುಷ್ಯನು ಮಾತ್ರ ತನ್ನ ಬುದ್ಧಿಚಾತುರ್ಯದಿಂದ ಸಂತಾನಪರಂಪರೆಯನ್ನು ನಿಲ್ಲಿಸಲು ಯತ್ನಿಸಬಹುದು. ಅದು ಯುಕ್ತವಲ್ಲ.

**ಅಥಾಧ್ಯಾತ್ಮಮ್** ॥ ಇಲ್ಲಿ ಆತ್ಮ ಶಬ್ದವು ದೇಹವಾಚಿಯೂ ಆಗಬಹುದು. ದೇಹದಲ್ಲಿರುವ ಚಿದಾತ್ಮನ ವಾಚಿಯೂ ಆಗಬಹುದು. **"ತತ್ ಸೃಷ್ಟ್ವಾ ತದೇವಾನುಪ್ರಾವಿಶತ್। ತತ್ತ್ವಮಸಿ । ನಿಹಿತಂ ಗುಹಾಯಾಮ್ ।"** ಇತ್ಯಾದಿ

ವಚನಗಳು ಹೃದಯದಲ್ಲಿರುವ ಚಿದಾತ್ಮನನ್ನು ತಿಳಿಯಬೇಕೆಂದೂ ಆತ್ಮಾನ್ವೇಷಣೆಗೆ ವೈಕುಂಠವನ್ನೋ ಕೈಲಾಸವನ್ನೋ ಹುಡುಕಿಕೊಂಡು ಹೋಗಬೇಕಾಗಿಲ್ಲವೆಂದೂ ಬೋಧಿಸುತ್ತವೆ. ಇದನ್ನು ಬಾಯಿಯಿಂದ ಹೊರಡುವ ವಾಗ್ರೂಪವಾದ ಉಪದೇಶದಿಂದ ಅಂತೇವಾಸಿಗಳಿಗೆ ತಿಳಿಸಿಕೊಡಬೇಕೆಂದೂ ಈ ಪಂಚಮಹಾಸಂಹಿತೆಯು ತಿಳಿಸಿಕೊಡುತ್ತದೆ. ವ್ಯಾವಹಾರಿಕ ಜಗತ್ತಿನಿಂದ ಆರಂಭಿಸಿ ಪಾರಮಾರ್ಥಿಕವಾದ ಬ್ರಹ್ಮವಿದ್ಯೆಯ ಪರ್ಯಂತ ಮಾನವನು ಹೇಗೆ ವರ್ತಿಸಬೇಕೆಂಬುದನ್ನು ಸೂಚಿಸುವ ಸಂಹಿತೆಗಳಿವು. ಅಧಿಲೋಕದಿಂದ ಆರಂಭಿಸಿ ಅಧ್ಯಾತ್ಮದವರೆಗೆ ಜೀವನಾದರ್ಶಗಳನ್ನು ತಿಳಿಸಿಕೊಡುವುದರಿಂದ ಇವು ಮಹಾಸಂಹಿತೆಗಳೆನಿಸುತ್ತವೆ. ವಿಶಾಲಾರ್ಥದ ಸಂಕೇತಗಳಿವು. ಇದಿಷ್ಟು ನಮ್ಮ ಸಂಕ್ಷಿಪ್ತವಾದ ವಿವೇಚನೆ.

ಈ ವಿವೇಚನೆಯು ವೇದಗಳ ಮಹಿಮೆಯನ್ನು ಮತ್ತಷ್ಟು ಉತ್ತುಂಗಶಿಖರಕ್ಕೆ ಏರಿಸುತ್ತದೆ. ಇದು ಶ್ರೀ ಶಂಕರಭಗವತ್ಪಾದರ ಭಾಷ್ಯಕ್ಕೆ ವಿರುದ್ಧವಾದದ್ದೂ ಅಲ್ಲ.

## ಚತುರ್ಥಾನುವಾಕ

**ಯಶ್ಛಂದಸಾಮೃಷಭೋ ವಿಶ್ವರೂಪಃ । ಛಂದೋಭ್ಯೋಽಧ್ಯಮೃತಾತ್ ಸಂಬಭೂವ । ಸಮೇಂದ್ರೋ ಮೇಧಯಾ ಸ್ಪೃಣೋತು । ಅಮೃತಸ್ಯ ದೇವ ಧಾರಣೋ ಭೂಯಾಸಮ್ । ಶರೀರಂ ಮೇ ವಿಚರ್ಷಣಮ್ । ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಮ್ । ಬ್ರಹ್ಮಣಃ ಕೋಶೋಽಸಿ ಮೇಧಯಾಪಿಹಿತಃ । ಶ್ರುತಂ ಮೇ ಗೋಪಾಯ । ಆವಹಂತೀ ವಿತನ್ವಾನಾ ॥೧॥**

ಮೇಧಾಶಕ್ತಿಯನ್ನು ಬಯಸತಕ್ಕವನು ಮಾಡಬೇಕಾದ ಜಪವನ್ನೂ, ಸಂಪತ್ತನ್ನು ಬಯಸತಕ್ಕವನು ಆಚರಿಸಬೇಕಾದ ಹೋಮವನ್ನೂ ಈ ಅನುವಾಕದಲ್ಲಿ ಹೇಳಲಾಗುವುದು.

ವೇದಗಳಲ್ಲಿ ಪ್ರಧಾನವಾದ ಓಂಕಾರವು ವೇದಗಳೆಂಬ ಹಸುಗಳ ಮಂದೆಯಲ್ಲಿ ಸಂಚರಿಸುವ ವೃಷಭವಾಗಿದೆ. ಅದು ವೇದಗಳೆಂಬ ಅಮೃತದಿಂದ ಆವಿರ್ಭವಿಸಿದ ಅಮೃತದ ಸಾರ. ಓಂಕಾರವು ಎಲ್ಲ ವರ್ಣಗಳಿಗೂ ಮೂಲವಾಗಿ ಎಲ್ಲ ಶಬ್ದಗಳಲ್ಲಿಯೂ ಸೇರಿಹೋಗಿರುವುದರಿಂದ ಅದು ವಿಶ್ವರೂಪವಾಗಿದೆ. ಪರಮೇಶ್ವರನಾದ ಓಂಕಾರವು ಮೇಧಾಶಕ್ತಿಯನ್ನಿತ್ತು ನನ್ನನ್ನು ಸಂತೋಷಪಡಿಸಿ ಕಾಪಾಡಲಿ. ಹೇ ದೇವ ! ಓಂಕಾರವೆ, ಅಮೃತವಾದ ಬ್ರಹ್ಮಜ್ಞಾನವನ್ನು ನಾನು

ಧರಿಸುವಂತಾಗಲಿ. ನನ್ನ ದೇಹವು ಅದನ್ನು ಗಳಿಸಲು ಯೋಗ್ಯವಾದದ್ದಾಗಲಿ. ನನ್ನ ನಾಲಿಗೆಯು ಜೇನಿನಂತಹ ಮಾತನ್ನು ಸುರಿಸಿ ಮಧುರಭಾಷಿಣಿಯಾಗಲಿ. ಜ್ಞಾನೋಪಯುಕ್ತಗಳಾದ ಬಹು ವಿಚಾರಗಳನ್ನು ನಾನು ಕಿವಿಗಳಿಂದ ಕೇಳುವಂತಾಗಲಿ. ಹೇ ಪ್ರಣವ! ಖಡ್ಗವಿರುವ ಒರೆಯಂತೆ ನೀನು ಪರಮಾತ್ಮನಿರುವ ಒರೆಯಾಗಿದ್ದೀಯೆ. ಆತನನ್ನು ಸಾಕ್ಷಾತ್ಕರಿಸಿಕೊಳ್ಳಬಹುದಾದ ಸ್ಥಳವಾಗಿದ್ದೀಯೆ. ಹೇ ದೇವ! ಲೌಕಿಕರ ಬಾಹ್ಯದೃಷ್ಟಿಗೆ ಗೋಚರಿಸದಂತೆ ಅಂತರ್ದೃಷ್ಟಿಯ ಮೇಧಾಶಕ್ತಿಯು ನಿನ್ನನ್ನು ಅಡಗಿಸಿಬಿಟ್ಟಿದೆ! ಶ್ರವಣದಿಂದ ಗಳಿಸಿರುವ ನನ್ನ ಜ್ಞಾನವು ಮಾಸಿಹೋಗದಂತೆ ಅದನ್ನು ರಕ್ಷಿಸಿ ಉಳಿಸಿಕೊಡು.

**'ದೇವಸ್ಯ ಪಶ್ಯತ ಕಾವ್ಯಮ್'** ಎಂಬ ಅಥರ್ವವೇದದ ಸೂಕ್ತಿಯು ವೇದವನ್ನು ಈಶ್ವರನ ಕಾವ್ಯವೆಂದು ಹೇಳಿದೆ. ಓಂಕಾರವು ವೃಷಭವೆಂದರೆ ಅದಕ್ಕೆ ಗೂಳಿಯ ಸಾದೃಶ್ಯವನ್ನು ಕೊಟ್ಟಂತಾಯಿತು. ಅದಕ್ಕೆ ಅನುಗುಣವಾಗಿ ಛಂದಸ್ಸುಗಳನ್ನು ಹಸುಗಳೆಂದು ರೂಪಿಸಿಕೊಳ್ಳಬೇಕಾಗುತ್ತದೆ. ಇದು ಏಕದೇಶವಿವರ್ತಿರೂಪಕಾಲಂಕಾರ. **"ಓಂಕಾರ ಏವ ಸರ್ವಾ ವಾಕ್, ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನಿ ಏವಮೋಂಕಾರೇಣ ಸರ್ವಾ ವಾಕ್ ಸಂತೃಣ್ಣಾ"** ಇತ್ಯಾದಿ ಶ್ರುತಿವಚನಗಳಿಂದ ಭಾಷೆಯಲ್ಲಿರುವ ಎಲ್ಲ ಅಕ್ಷರಗಳೂ ಓಂಕಾರವ್ಯಾಪ್ತಗಳೆಂದು ತಿಳಿದುಬರುತ್ತದೆ. ಸಮಸ್ತಭಾಷೆಗಳೂ ಅಕ್ಷರಗಳಿಂದ ಕೂಡಿವೆಯಾದ್ದರಿಂದ ಓಂಕಾರವು ವಿಶ್ವರೂಪವಾಗಿದೆ. 'ತದ್ಯಥಾ ಶಂಕುನಾ' (ಛಾಂ. ೨-೨೩-೩) ಹೀಗೆ ಓಂಕಾರವು ವಿಶೇಷವಾಗಿ ಸ್ತುತಿಸಲ್ಪಟ್ಟಿರುವುದರಿಂದ ಅದು 'ಪ್ರಣವ' ಎನಿಸಿದೆ. ಪ್ರಕರ್ಷೇಣ ನೂಯತೇ ಸ್ತೂಯತೇ ಇತಿ ಪ್ರಣವಃ । ಣು-ಸ್ತುತೌ ಎಂಬ ಧಾತುವಿನಿಂದ ಇದು ನಿಷ್ಪನ್ನವಾದ ಶಬ್ದ. ಪ್ರಣವವೇ ಇಂದ್ರ-ಪರಮೇಶ್ವರ. ಇದಿ-ಪರಮೈಶ್ವರ್ಯೇ ಎಂಬ ಧಾತುವಿನಿಂದ ಇಂದ್ರ ಶಬ್ದವು ನಿಷ್ಪನ್ನವಾಗಿದೆ. ಮೇಧಾ ಎಂದರೆ ಊಹಾಪೋಹಗಳಿಂದ ಅತ್ಯಂತ ಸೂಕ್ಷ್ಮವಾದ ಅರ್ಥವನ್ನೂ ಗ್ರಹಿಸಬಲ್ಲ, ಗಾಢವಾದ ಸ್ಮರಣಶಕ್ತಿಯುಳ್ಳ ಮತ್ತು ಅಂತರ್ದೃಷ್ಟಿಯಿರುವ ಬುದ್ಧಿವಿಶೇಷ. ಅದಕ್ಕೆ ಮಾತ್ರ ಬ್ರಹ್ಮವು ಗೋಚರವಾದದ್ದು. ಜಿತೇಂದ್ರಿಯನಾದರೂ ಚಿತ್ತಶುದ್ಧಿಯಾಗಿದ್ದರೂ ಮೇಧಾಶಕ್ತಿಯಿಲ್ಲದವನಿಗೆ ಬ್ರಹ್ಮಜ್ಞಾನವಾಗದು. ಎಷ್ಟು ಬುದ್ಧಿಶಾಲಿಗಳಾದರೂ ಲೌಕಿಕವಾದ ಬಾಹ್ಯದೃಷ್ಟಿಯುಳ್ಳವರಾದರೆ, ಅವರಿಗೆ ಬ್ರಹ್ಮವು ಗೋಚರವಾಗತಕ್ಕದ್ದಲ್ಲ. **'ಸ ಮೇಂದ್ರೋ ಮೇಧಯಾ ಸ್ಪೃಣೋತು'** ಎಂಬಲ್ಲಿ ಮಾ ಇಂದ್ರಃ ಎಂದು ಪದಚ್ಛೇದ. **ಮಾ** = ಮಾಂ, **ಸ್ಪೃಣೋತು** = ಸ್ಪೃ-ಪ್ರೀತಿಪಾಲನಯೋಃ ಎಂಬ ಧಾತುವಿನ ರೂಪ.

ಇವಿಷ್ಟು ಮೇಧಾಕಾಮನು ಮಾಡಬೇಕಾದ ಜಪದ ಮಂತ್ರಗಳು. ಆವಹಂತೀ ವಿತನ್ವಾನಾ - ಎಂಬುದು ಮುಂದಿನ ಹೋಮಮಂತ್ರಗಳೊಡನೆ ಅನ್ವಿತ.

**ಕುರ್ವಾಣಾಚೀರಮಾತ್ಮನಃ । ವಾಸಾಗ್ಂಸಿ ಮಮ ಗಾವಶ್ಚ । ಅನ್ನಪಾನೇ ಚ ಸರ್ವದಾ । ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಃ ಸಹ ಸ್ವಾಹಾ । ಆಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ವಿಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ಪ್ರಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ದಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ಶಮಾಯಂತು ಬ್ರಹ್ಮಚಾರಿಣಃ ಸ್ವಾಹಾ ॥೨॥**

ಇವು ಶ್ರೀಕಾಮನ ಹೋಮಮಂತ್ರಗಳು. ಹಿಂದಿನ ಹನಸಿನ ಕಡೆಯಲ್ಲಿರುವ 'ಆವಹಂತೀ ವಿತನ್ವಾನಾ' ಎಂಬ ಎರಡು ಪದಗಳಿಗೆ ಇಲ್ಲಿ ಅನ್ವಯ. ವಸ್ತ್ರ, ಗೋವು, ಅನ್ನಪಾನಾದಿಗಳನ್ನು ಸರ್ವದಾ ನನಗೆ ತರತಕ್ಕದ್ದು ಆದ ಯಾವ ಶ್ರೀ ಇದೆಯೋ ಆ ಶ್ರೀಯನ್ನು, ಹೇ ಓಂಕಾರ, ಶೀಘ್ರವಾಗಿ ನನಗೆ ದೊರಕಿಸಿಕೊಡು. ತತೋ ಮೇ ಶ್ರಿಯಮಾಹವ = ಮೇಧಾಶಕ್ತಿಯನ್ನು ನನಗೆ ಕೊಟ್ಟಮೇಲೆ ಈ ಸಂಪತ್ತನ್ನು ನನಗೆ ಅನುಗ್ರಹಿಸು. ನನ್ನ ಬಳಿಗೆ ವಿದ್ಯಾರ್ಜನೆಗಾಗಿ ಬ್ರಹ್ಮಚಾರಿಗಳು ಬರುತ್ತಿರಲಿ. ಮೇಲಿಂದ ಮೇಲೆ ಪರಂಪರೆಯಾಗಿ ಬರುತ್ತಿರಲಿ. ಆ ಬ್ರಹ್ಮಚಾರಿಗಳು ಶಮದಮಾದಿ ಗುಣಸಂಪನ್ನರಾಗಿರಲಿ.

**ವಿವರಣೆ : ದಮಾಯಂತು** = ಬ್ರಹ್ಮಚಾರಿಗಳು ದಮಗುಣ-ವುಳ್ಳವರಾಗಿರಲಿ. **ಶಮಾಯಂತು** = ಶಮಗುಣವುಳ್ಳವರಾಗಿರಲಿ. **ದಮ** = ಇಂದ್ರಿಯನಿಗ್ರಹ. **ಶಮ** = ಮನೋನಿಗ್ರಹ. **ಅಚೀರಂ** = ತಡಮಾಡದೆ, ಬೇಗನೆ. ಅಚೀರಶಬ್ದದ ಇಕಾರಕ್ಕೆ ಛಾಂದಸವಾದ ದೀರ್ಘಬಂದಿದೆ. ಶಮಯಂತು, ದಮಯಂತು -ಎಂದು ಲೌಕಿಕ ಪ್ರಯೋಗ.

ತತೋ ಮೇ ಶ್ರಿಯಮಾವಹ-ಎಂಬ ವಾಕ್ಯವು ಗಮನಾರ್ಹವಾದದ್ದು. ಮೊದಲು ಮೇಧಾಶಕ್ತಿ ಬರಲಿ. ಆಮೇಲೆ ಸಂಪತ್ತು ಬರಲಿ ಎಂದು ಪ್ರಾರ್ಥನೆ ಇದೆ. ಅವಿವೇಕಿಗೆ ಸಂಪತ್ತು ಬಂದರೆ ಅನರ್ಥವನ್ನೇ ತಂದೊಡ್ಡುತ್ತದೆ. ಬುದ್ಧಿಶಾಲಿಯಾದರೋ ಧನವನ್ನು ಯುಕ್ತರೀತಿಯಲ್ಲಿ ವಿನಿಯೋಗಿಸಿ ಕೀರ್ತಿಶಾಲಿಯಾಗಿ ಶ್ರೇಯಸ್ಸನ್ನು ಪಡೆಯುತ್ತಾನೆ. ಭಾಷ್ಯಕಾರರು ಇದನ್ನೇ ಗಮನಿಸಿ "ಅಮೇಧಸೋ ಹಿ ಶ್ರೀರನರ್ಥಾಯೈವ" ಎಂದು ಬರೆದಿದ್ದಾರೆ. ಇವು

ಹೋಮಮಂತ್ರಗಳೆಂಬುದನ್ನು ಸ್ವಾಹಾಕಾರವು ಸೂಚಿಸುತ್ತದೆ. ಉದ್ದಿಷ್ಟ-ದೇವತೆಯು ಪ್ರಕೃತವಾದ ಓಂಕಾರವೇ.

**ಯಶೋಜನೇऽಸಾನಿ ಸ್ವಾಹಾ । ಶ್ರೇಯಾನ್ ವಸ್ಯಸೋऽಸಾನಿ ಸ್ವಾಹಾ । ತಂತ್ವಾ ಭಗಪ್ರವಿಶಾನಿ ಸ್ವಾಹಾ । ಸಮಾಭಗಪ್ರವಿಶ ಸ್ವಾಹಾ । ತಸ್ಮಿನ್ ಸಹಸ್ರಶಾಖೇ । ನಿಭಗಾಹಂ ತ್ವಯಿ ಮೃಜೇ ಸ್ವಾಹಾ । ಯಥಾಪಃ ಪ್ರವತಾಯಂತಿ । ಯಥಾ ಮಾಸಾ ಅಹರ್ಜರಮ್ । ಏವಂ ಮಾಂ ಬ್ರಹ್ಮಚಾರಿಣಃ । ಧಾತರಾಯಂತು ಸರ್ವತಃ ಸ್ವಾಹಾ । ಪ್ರತಿವೇಶೋऽಸಿ ಪ್ರಮಾ ಭಾಹಿ ಪ್ರಮಾ ಪದ್ಯಸ್ವ ॥೩॥**

ಹೀಗೆ ಅಧಿಕಸಂಖ್ಯೆಯಲ್ಲಿ ವಿದ್ಯಾರ್ಥಿಗಳು ನನ್ನ ಬಳಿಗೆ ಬಂದರೆ ನನಗೆ ಶ್ರೇಯಸ್ಸು ಬರುತ್ತದೆ. ಗೃಹಸ್ಥರ ನಡುವೆ ನಾನು ಶ್ರೇಷ್ಠನಾಗುತ್ತೇನೆ. ಹೇ ಭಗವನ್-ಪ್ರಣವ, ಬ್ರಹ್ಮದ ಕೋಶವಾದ ನಿನ್ನೊಳಗೆ ನಾನು ಸೇರಿಹೋಗುವಂತೆ ಅನುಗ್ರಹಿಸು. ನೀನು ನನ್ನೊಳಗೆ ಸೇರಿಹೋಗು. ನಾನೇ ನೀನಾಗಿ ಬ್ರಹ್ಮದಲ್ಲಿ ಸೇರಿಹೋಗಲಿ. ಬಹುಭೇದವುಳ್ಳ ನಿನ್ನಲ್ಲಿ ನಾನು ಸೇರಿ, ನನ್ನ ಪಾಪಕೃತ್ಯಗಳನ್ನು ಶೋಧಿಸಿಕೊಳ್ಳುವೆನು. ಪ್ರಸನ್ನನಾಗು. ಇಳಿಜಾರುಪ್ರದೇಶದಲ್ಲಿ ನೀರು ಹರಿದುಬರುವಂತೆ, ಮಾಸಗಳು ವರ್ಷದಲ್ಲಿ ಬಂದು ಸೇರಿಕೊಳ್ಳುವಂತೆ, ಬ್ರಹ್ಮಚಾರಿಗಳು ನನ್ನ ಬಳಿಗೆ ಹರಿದುಬಂದು ನನ್ನಲ್ಲಿ ಸೇರಿಕೊಳ್ಳಲಿ. ಓ ಪ್ರಣವವೆ, ನೀನು ನನ್ನ ನೆರೆಮನೆಯಾಗಿದ್ದೀಯೆ. ನನಗೆ ಆಶ್ರಯಕೊಡು. ನಿನ್ನ ದಿವ್ಯರೂಪವನ್ನು ತೋರಿಸು.

ವಿವರಣೆ : **ಯಶಃ** = ಯಶಸ್ವಿಯು, **ಅಸಾನಿ** = ಭವಾನಿ – ನಾನು ಆಗಬೇಕು. ಅಸ-ಭುವಿ ಧಾತುವಿನ ಲೋಡ್ರೂಪ. **ವಸ್ಯಸಃ** = ಮನೆಯಲ್ಲಿ ವಾಸಿಸುವ ಗೃಹಸ್ಥನಿಗಿಂತ ಅಥವಾ ವಸು(ಧನ)ಉಳ್ಳವನಿಗಿಂತ. ಇದು ವೈದಿಕ ಶಬ್ದ. **ಭಗ** = ಭಗವನ್, **ಅಹಂ ತ್ವಯಿ ನಿಮೃಜೇ** ಎಂದು ಅನ್ವಯ. **ಪ್ರವತಾ** = ಇಳಿಜಾರಾದ, **ಅಹಾನಿ ಜೀರ್ಯಂತಿ ಅಸ್ಮಿನ್ನಿತಿ ಅಹರ್ಜರಃ** = ಸಂವತ್ಸರ. **ಮಾ** = ಮಾಂ, **ಪ್ರಭಾಹಿ, ಮಾಂ ಪ್ರಪದ್ಯಸ್ವ.**

ಆತ್ಮಜ್ಞಾನವನ್ನು ಬಯಸುವ ಮುಮುಕ್ಷುವಿಗೆ ವಸ್ತ್ರ, ಗೋವು, ಧನಾದಿಗಳು ಏಕೆ ಬೇಕು? ಆತ್ಮಜ್ಞಾನ, ಧನಧಾನ್ಯಗಳು ಎಂಬ ಎರಡು ಬಗೆಯ ಸಂಪತ್ತುಗಳಿವೆ. ಆತ್ಮಜ್ಞಾನವು ದೈವೀ ಸಂಪತ್ತು. ಇದು ಮೋಕ್ಷಕ್ಕೆ ಅತ್ಯಾವಶ್ಯಕ. ಧನಧಾನ್ಯಗಳು ಮಾನುಷಸಂಪತ್ತು. ಈ ಸಂಪತ್ತು ಅತಿಥಿಸತ್ಕಾರವೇ ಮೊದಲಾದ ಐಹಿಕವಾದ ಪುಣ್ಯಕಾರ್ಯಗಳನ್ನು ಮಾಡಿ ದುರಿತಕ್ಷಯದ್ವಾರಾ ಚಿತ್ತಶುದ್ಧಿಗೆ ಆವಶ್ಯಕ.

**ಜ್ಞಾನಮುತ್ಪದ್ಯತೇ ಪುಂಸಃ ಕ್ಷಯಾತ್ ಪಾಪಸ್ಯ ಕರ್ಮಣಃ ।**
**ಯಥಾದರ್ಶತಲಪ್ರಖ್ಯೇ ಪಶ್ಯತ್ಯಾತ್ಮಾನಮಾತ್ಮನಾ ॥**

ಪಾಪಕರ್ಮವು ಕ್ಷಯಿಸಿದ ಮೇಲೆ ಮನುಷ್ಯನಿಗೆ ಆತ್ಮಜ್ಞಾನ ಹುಟ್ಟುತ್ತದೆ. ಸ್ವಚ್ಛವಾದ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ಕಾಣುವಂತೆ ಶುದ್ಧವಾದ ಅಂತಃಕರಣದಲ್ಲಿ ಅವನು ಆತ್ಮನನ್ನು ಕಾಣುತ್ತಾನೆ.

## ಪಂಚಮಾನುವಾಕ

**ಭೂರ್ಭುವಃಸುವರಿತಿ ವಾ ಏತಾಸ್ತಿಸ್ರೋ್ರವ್ಯಾಹೃತಯಃ । ತಾಸಾಮುಹ ಸ್ಮೈತಾಂ ಚತುರ್ಥೀಮ್ । ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್‌ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಮ್ । ಸುವರಿತ್ಯಸೌ ಲೋಕಃ ॥೧॥**

ಓಂಕಾರವೆಂಬ ಪ್ರತೀಕದಲ್ಲಿ ಬ್ರಹ್ಮವನ್ನು ಧ್ಯಾನಿಸಬೇಕೆಂದು ಹೇಳಿದ್ದಾಯಿತು. ಅನಂತರ ಜಪಕ್ಕಾಗಿಯೂ ಹೋಮಕ್ಕಾಗಿಯೂ ಅಪೇಕ್ಷಿತವಾದ ಮಂತ್ರಗಳನ್ನು ತಿಳಿಸಿ ಜಪಹೋಮಗಳ ಫಲವನ್ನು ವಿವರಿಸಲಾಯಿತು. ಅವೆಲ್ಲವೂ ಪರಂಪರೆಯಿಂದ ಸ್ವಾರಾಜ್ಯಸಿದ್ಧಿಗೆ (ಮೋಕ್ಷಪ್ರಾಪ್ತಿಗೆ) ಉಪಯುಕ್ತವಾಗತಕ್ಕವು. ಈಗ ವ್ಯಾಹೃತ್ಯಾತ್ಮಕವಾದ ಬ್ರಹ್ಮದ ಅಂತರುಪಾಸನೆಯನ್ನು ಹೇಳಲಾಗುವುದು.

ಭೂಃ ಭುವಃ ಸುವಃ ಎಂಬ ಮೂರು ವ್ಯಾಹೃತಿಗಳು ಪ್ರಸಿದ್ಧವಾಗಿವೆ. ಮಹಃ ಎಂಬ ಇನ್ನೊಂದು ಮಹತ್ತರವಾದ ನಾಲ್ಕನೆಯ ವ್ಯಾಹೃತಿಯು ಮಹಾಚಮಸ್ಯನೆಂಬ ಋಷಿಗೆ ಗೋಚರವಾಯಿತು. ಈ ಮಹ ಎಂಬ ವ್ಯಾಹೃತಿಯು ಬ್ರಹ್ಮ. ಅದು ಸರ್ವವನ್ನೂ ವ್ಯಾಪಿಸುವ ಆತ್ಮ. ಅದು ಉಳಿದ ಎಲ್ಲ ವ್ಯಾಹೃತಿಗಳಿಗಿಂತ ಹೆಚ್ಚು ಮಹಿಮೆಯುಳ್ಳದ್ದು. ಭೂಃ ಭುವಃ ಸುವಃ ಎಂಬಿವು ಮೂರು ಲೋಕಗಳಿದ್ದಂತೆ.

**ಮಹಃ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇಲೋಕಾ ಮಹೀಯಂತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚಂದ್ರಮಾಃ । ಚಂದ್ರಮಸಾ ವಾವ ಸರ್ವಾಣಿ ಜ್ಯೋತೀಗ್‌ಂಷಿ ಮಹೀಯಂತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಗ್‌ಂಷಿ ॥೨॥**

ಅಂದರೆ ಮಹಃ ಎಂಬ ವ್ಯಾಹೃತಿಯು ಸೂರ್ಯನಿದ್ದಂತೆ. ಸೂರ್ಯನಿಂದಲ್ಲವೆ ಈ ಲೋಕಗಳು ವೃದ್ಧಿಹೊಂದುತ್ತವೆ? ಸೂರ್ಯನು

ಪ್ರಕಾಶಿಸುವುದರಿಂದ ಲೋಕದಲ್ಲಿ ಬೆಳಕು ಉಷ್ಣತೆಗಳುಂಟಾಗುತ್ತವೆ. ಅದರಿಂದಲೇ ಮನುಷ್ಯಾದಿ ಜೀವಿಗಳೂ ಸಸ್ಯಗಳೂ ಜನಿಸಿ ಲೋಕವು ವರ್ಧಿಸುತ್ತದೆ ಎಂದು ಅಭಿಪ್ರಾಯ. ಅಂತೆಯೇ ಆ ಮೂರು ವ್ಯಾಹೃತಿಗಳೂ ಕ್ರಮವಾಗಿ ಅಗ್ನಿ, ವಾಯು, ಆದಿತ್ಯರಿದ್ದಂತೆ. ನಾಲ್ಕನೆಯ ಈ ಮಹ ಎಂಬ ವ್ಯಾಹೃತಿಯು ಚಂದ್ರನಿದ್ದಂತೆ. ಚಂದ್ರನಿಂದಲ್ಲವೆ ಈ ಅಗ್ನಿ ಮುಂತಾದವು ವೃದ್ಧಿಯನ್ನು ಪಡೆಯುತ್ತವೆ?[೧]

ಭೂಃ ಎಂಬ ವ್ಯಾಹೃತಿ ಋಗ್ವೇದ. ಭುವಃ ಎನ್ನುವುದು ಸಾಮವೇದ. ಸುವಃ ಎನ್ನುವುದು ಯಜುರ್ವೇದ ಎಂದು ಭಾವಿಸಬೇಕು.

**ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇ ವೇದಾ ಮಹೀಯಂತೇ । ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹ ಇತ್ಯನ್ನಮ್ ॥ ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯಂತೇ । ತಾ ವಾ ಏತಾಶ್ಚತಸ್ರಶ್ಚತುರ್ಧಾ । ಚತಸ್ರಶ್ಚತಸ್ರೋವ್ಯಾಹೃತಯಃ । ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ ॥೩॥**

ಮಹಃ ಎಂಬುದು ಬ್ರಹ್ಮ. ಇಲ್ಲಿ ಬ್ರಹ್ಮವೆಂದರೆ ಓಂಕಾರವೆಂದರ್ಥ. ಈ ಓಂಕಾರದೊಡನೆ ವೇದಾಧ್ಯಯನವನ್ನು ಆರಂಭಿಸುವುದರಿಂದ ವೇದಗಳು ಓಂಕಾರದ ಮಹಿಮೆಗೆ ಒಳಪಟ್ಟವು.

ಈ ನಾಲ್ಕು ವ್ಯಾಹೃತಿಗಳನ್ನು ನಾಲ್ಕು ಪ್ರಕಾರಗಳಿಂದ ಉಪಾಸನೆ ಮಾಡಬೇಕೆಂಬುದು ಈ ಅನುವಾಕದ ಒಟ್ಟು ತಾತ್ಪರ್ಯ. ಈ ಉಪಾಸನೆ ಮಾಡತಕ್ಕವನಿಗೆ ಬ್ರಹ್ಮಜ್ಞಾನವಾಗುವುದೆಂದೂ ಬ್ರಹ್ಮಜ್ಞಾನಿಯನ್ನು ಸಕಲ ದೇವತೆಗಳೂ ಗೌರವಿಸಿ ಪೂಜಿಸುತ್ತಾರೆಂದೂ ಇಲ್ಲಿ ಹೇಳಿದೆ.

## ಷಷ್ಠಾನುವಾಕ

**ಸಯ ಏಷೋಽಂತರ್ಹೃದಯಃ ಆಕಾಶಃ । ತಸ್ಮಿನ್ನಯಂ ಪುರುಷೋಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷ ಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ**

---

ಟಿಪ್ಪಣಿ ೧ : ಇದು ಹೇಗೆಂಬುದು ಸ್ಪಷ್ಟವಾಗುವುದಿಲ್ಲ. ವನಮಾಲಾವ್ಯಾಖ್ಯಾನದಲ್ಲಿ "ಅಗ್ನಿವಾಯ್ವಾದಿತ್ಯದೇವತಾನಾಂ ಚಂದ್ರವ್ಯಾಪ್ಯತಾ ಪ್ರಸಿದ್ಧೈವ" ಎಂದು ಬರೆದಿದೆ. ಪ್ರಥಮಾಂ ಪಿಬತೇ ವಹ್ನಿಃ – ಇತ್ಯಾದಿ ಶಾಸ್ತ್ರಸಿದ್ಧವೆಂದೂ ಬರೆಯಲಾಗಿದೆ. ಅಗ್ನಿ ಮುಂತಾದವರು ಚಂದ್ರನಕಲೆಯನ್ನು ಕುಡಿಯುತ್ತಾರೆ–ಎಂಬುದರ ತಾತ್ಪರ್ಯವೇನು? ಬಲ್ಲವರು ವಿವರಿಸಬೇಕು.

**ಕೇಶಾಂತೋ ವಿವರ್ತತೇ । ವ್ಯಪೋಹ್ಯಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ ॥೧॥**

**ಮನೋಮಯ** = ಪರಿಷ್ಕೃತವಾದ ಮನಸ್ಸಿಗೆ ಗೋಚರನಾದ ಆತ್ಮ. **ಹಿರಣ್ಮಯ** = ಜ್ಯೋತಿಃಸ್ವರೂಪ.

ಉಪಾಸನೆಗಾಗಿ ಇದುವರೆಗೆ ಹೇಳಿದ ಅಗ್ನಿ, ಆದಿತ್ಯ ಮುಂತಾದ ದೇವತೆಗಳು ಪರಬ್ರಹ್ಮದ ಅಂಗಗಳಿದ್ದಂತೆ ಗೌಣವಾದವುಗಳು. ಪ್ರಧಾನವಾದ ಪರಬ್ರಹ್ಮದ ಉಪಾಸನೆಯುಂಟೊ? ಆ ಬ್ರಹ್ಮವಸ್ತುವಿನ ಉಪಲಬ್ಧಿ-ಯಾಗುವುದಾದರೂ ಹೇಗೆ ಎಂಬುದನ್ನು ಈಗ ಹೇಳಲಾಗುತ್ತದೆ. ಇಲ್ಲಿ ಉಪಲಬ್ಧವಾಗುವ ಬ್ರಹ್ಮವು ಮನೋಮಯತ್ವಾದಿಧರ್ಮವಿಶಿಷ್ಟವಾದರೂ ಸರ್ವಾತ್ಮಭಾವವನ್ನರಿಯಲು ಮಾರ್ಗವಾಗುತ್ತದೆ.

ನಮ್ಮ ಎದೆಯೊಳಗೆ ತಾವರೆಯ ದಳದಂತಿರುವ ಒಂದು ಮಾಂಸಖಂಡವಿದೆ. ಅದಕ್ಕೆ ಹೃದಯವೆಂದು ಹೆಸರು. ಅದು ಪ್ರಾಣವಾಯುವಿನ ಸ್ಥಾನ. ಅಲ್ಲಿಯೇ ಪರಮಪುರುಷನಾದ ಆತ್ಮನಿದ್ದಾನೆಂದು ತಿಳಿಯಬೇಕು. ಅವನು ಮನೋಮಯ. ಎಂದರೆ ಜ್ಞಾನಗೋಚರನೂ ಅಂತಃಕರಣಾಭಿಮಾನಿಯೂ ಆಗಿದ್ದಾನೆ. ಅವನು ಮರಣರಹಿತ, ಜ್ಯೋತಿರ್ಮಯ. ಅವನು ಪರಮೇಶ್ವರನಾದ ಇಂದ್ರ.

ಈತನನ್ನು ಅರಿಯುವುದು ಹೇಗೆಂದರೆ ನಮ್ಮ ನಾಲಗೆಯ ಬುಡದಲ್ಲಿ ಮೇಲಿಂದ ಜೋಲುತ್ತಿರುವ ಕಿರುನಾಲಗೆಯೆಂಬ ಒಂದು ಮಾಂಸಪಿಂಡ-ವಿದೆಯಷ್ಟೆ. ಹಿಂದೆ ಹೇಳಿದ ಹೃದಯದಿಂದ ಹೊರಟ ಸುಷುಮ್ನಾ ಎಂಬ ಒಂದು ಸೂಕ್ಷ್ಮವಾದ ನಾಡಿಯು ಈ ಕಿರುನಾಲಗೆಯ ಮೂಲಕ ಹಾಯ್ದು ತಲೆಯಕೂದಲಿನ ಬುಡದಲ್ಲಿ ಶಿರಸ್ಸಿನ ಎರಡು ಹೋಳುಗಳ ನಡುವೆ ಹಾಯ್ದುಬಂದಿರುತ್ತದೆ. ಇದು ಯೋಗಶಾಸ್ತ್ರದಲ್ಲಿ ಪ್ರಸಿದ್ಧವಾದ ಸಂಗತಿ. ಈ ನಾಡಿಯು ಇಂದ್ರಯೋನಿ. ಪರಮಾತ್ಮನಾದ ಇಂದ್ರನನ್ನು ಅರಿತುಕೊಳ್ಳುವ ಒಂದು ಮಾರ್ಗವೆಂದು ತಿಳಿಯಬೇಕು.

ಈ ಪ್ರಕಾರವಾಗಿ ಯೋಗಶಾಸ್ತ್ರದ ಒಂದು ಸಾಧನಮಾರ್ಗವನ್ನೂ ಸಗುಣಬ್ರಹ್ಮದ ಉಪಾಸನೆಯ ಈ ಅನುವಾಕದಲ್ಲಿ ಹೇಳಲಾಗಿದೆ. ಈ ಉಪಾಸಕನು ಸುಷುಮ್ನಾನಾಡಿಯ ಮೂಲಕ ಶೀರ್ಷಕಪಾಲವನ್ನು ಭೇದಿಸಿ ಅಗ್ನಿ, ವಾಯು, ಆದಿತ್ಯಸ್ವರೂಪನೂ ಇವೆಲ್ಲವನ್ನು ಒಳಗೊಂಡ ಬ್ರಹ್ಮವೂ ಆಗಿಬಿಡುತ್ತಾನೆ. ಇದೆಲ್ಲವೂ ಯೋಗಶಾಸ್ತ್ರದಲ್ಲಿ ಹೇಳಿದ ಉಪಾಸನಾಫಲ.

ಉಪಾಸಕನು ಸೋಪಾನಮಾರ್ಗದಿಂದ ಮೇಲಕ್ಕೆ ಏರುತ್ತ ಏರುತ್ತ ಕ್ರಮಮುಕ್ತಿಯನ್ನು ಪಡೆಯುತ್ತಾನೆ. ಇಲ್ಲಿ ಕ್ರಮವು ವಿವಕ್ಷಿತವಲ್ಲವೆಂದೂ ಬ್ರಹ್ಮಭಾವವು ಪ್ರಾಪ್ತವಾದಾಗ ಅಗ್ನಿಸ್ವರೂಪಾದಿಗಳು ಸ್ವತಃ ಸಿದ್ಧವಾಗುತ್ತವೆ ಎಂದೂ ಅಭಿಪ್ರಾಯವಿದೆ.

**ಭೂರಿತ್ಯಗ್ನೌ ಪ್ರತಿತಿಷ್ಠತಿ** = ಭೂಃ ಎಂಬ ವ್ಯಾಹೃತಿಯನ್ನು ಅಗ್ನಿಯೆಂದು ಉಪಾಸನೆ ಮಾಡಿರತಕ್ಕವನು ಅಗ್ನಿಸ್ವರೂಪನೇ ಆಗಿ ಲೋಕವನ್ನು ವ್ಯಾಪಿಸುತ್ತಾನೆ ಎಂದರ್ಥ. ಹೀಗೆಯೇ ಇತರ ವಾಕ್ಯಗಳಲ್ಲಿಯೂ ಯೋಜಿಸಿಕೊಳ್ಳಬೇಕು.

**ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಮ್ । ಆಪ್ನೋತಿ ಮನಸಸ್ಪತಿಮ್ । ವಾಕ್‌ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನಪತಿಃ । ಏತತ್ತತೋ ಭವತಿ । ಆಕಾಶಶರೀರಂ ಬ್ರಹ್ಮ । ಸತ್ಯಾತ್ಮಪ್ರಾಣಾರಾಮಂ ಮನ ಆನಂದಮ್ । ಶಾಂತಿಸಮೃದ್ಧಮಮೃತಮ್ । ಇತಿ ಪ್ರಾಚೀನಯೋಗ್ಯೋಪಾಸ್ವ ॥೨॥**

ಸ್ವಯಮೇವ ರಾಟ್ ಸ್ವರಾಟ್. ಸ್ವರಾಜೋ ಭಾವಃ ಸ್ವಾರಾಜ್ಯಂ. ಪ್ರಕಾಶಮಾನವಾದ ಒಂದೇ ಚೈತನ್ಯವೆಂದರ್ಥ. ಆಕಾಶದಂತೆ ಸೂಕ್ಷ್ಮವಾದ ಶರೀರವುಳ್ಳದ್ದು ಆಕಾಶಶರೀರ. ಜಲಾದಿಗಳಿಂದಲೂ ದುಃಖಾದಿಗಳಿಂದಲೂ ಸಂಸರ್ಗವಿಲ್ಲದ್ದು ಎಂದರ್ಥ.

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥** –ಗೀತಾ ೧೩–೩೨

ಸತ್ಯಾತ್ಮ = ಸತ್ಯಸ್ವರೂಪ. ಸದಾ ಏಕಸ್ವರೂಪವೆಂದರ್ಥ. ಅಥವಾ ಸಚ್ಚ ತ್ಯಚ್ಚ ಸತ್ಯಂ– ಎಂದು ವ್ಯುತ್ಪತ್ತಿ. ಸತ್–ಮೂರ್ತವಸ್ತುತ್ರಯ–ಭೂಮಿ, ಜಲ, ಮತ್ತು ಅಗ್ನಿ. ತ್ಯತ್ = ವಾಯು, ಆಕಾಶ ಎಂಬ ಅಮೂರ್ತದ್ವಯ. ಇಂತಹ ಸತ್ಯವೇ ಸ್ವರೂಪವಾಗಿ ಉಳ್ಳದ್ದು ಸತ್ಯಾತ್ಮ. ಪಂಚಮಹಾಭೂತಗಳಾಗಿ ತೋರಿಕೊಳ್ಳತಕ್ಕದ್ದು ಸತ್ಯಾತ್ಮ. ಪ್ರಾಣಾರಾಮಮ್ = ಪ್ರಾಣಗಳ ಆರಮಣವು–ಕ್ರೀಡೆಯು ಯಾವ ನಿಯಂತೃವಿನಲ್ಲಿ ಇದೆಯೋ ಅದು. ಸರ್ವಪ್ರಾಣಗಳ ನಿಯಾಮಕವೆಂದರ್ಥ. ಮನಃ ಆನಂದಮ್=ಮನಸ್ಸು ಆನಂದಕಾರಿಯೇ ಯಾರಿಗೋ ಅದು. ಜೀವನ್ಮುಕ್ತಸ್ವರೂಪ.

ಈ ಪ್ರಕಾರವಾದ ಬ್ರಹ್ಮವನ್ನು, ಹೇ ಪ್ರಾಚೀನಯೋಗ್ಯ, ವ್ಯಾಹೃತಿಗಳಲ್ಲಿ ಉಪಾಸನೆ ಮಾಡು.

## ಸಪ್ತಮಾನುವಾಕ

**ಪೃಥಿವ್ಯಂತರಿಕ್ಷಂ ದ್ಯೌರ್ದಿಶೋऽವಾಂತರದಿಶಾಃ । ಅಗ್ನಿರ್ವಾಯು-ರಾದಿತ್ಯಶ್ಚಂದ್ರಮಾ ನಕ್ಷತ್ರಾಣಿ । ಆಪ ಓಷಧಯೋ ವನಸ್ಪತಯ ಆಕಾಶ ಆತ್ಮಾ । ಇತ್ಯಧಿಭೂತಮ್ । ಅಥಾಧ್ಯಾತ್ಮಮ್ । ಪ್ರಾಣೋವ್ಯಾನೋऽಪಾನ ಉದಾನಃ ಸಮಾನಃ । ಚಕ್ಷುಃ ಶ್ರೋತ್ರಂ ಮನೋ ವಾಕ್ ತ್ವಕ್ । ಚರ್ಮ ಮಾಗ್ಂಸಗ್ಂಸ್ನಾವಾಸ್ಥಿ ಮಜ್ಜಾ । ಏತದಧಿವಿಧಾಯ ಋಷಿರವೋಚತ್ । ಪಾಂಕ್ತಂ ವಾ ಇದಗ್ಂ ಸರ್ವಮ್ । ಪಾಂಕ್ತೇನೈವ ಪಾಂಕ್ತಗ್ಂಸ್ಪೃಣೋತೀತಿ ॥೧॥**

ಈ ಅನುವಾಕದಲ್ಲಿಯೂ ಪ್ರಕಾರಾಂತರವಾಗಿ ಬ್ರಹ್ಮೋಪಾಸನೆಯೇ ಬಂದಿದೆ. ಪಂಚ (ಐದು) ಎಂಬ ಸಂಖ್ಯೆ ಪ್ರಸಿದ್ಧವಾದದ್ದು. ಪಂಚ ಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚಮಹಾಭೂತಗಳು, ಪಂಚಸ್ಪರ್ಶಾದಿ ವಿಷಯಗಳು- ಇತ್ಯಾದಿಗಳನ್ನು ಪರಿಶೀಲಿಸಬಹುದು. ಪಂಚವೇ ರೂಪಭೇದದಿಂದ ಪಂಕ್ತಿಯಾಗಿ ಪಂಕ್ತಿ ಎಂಬ ಛಂದಸ್ಸಿನ ಹೆಸರಾಗಿದೆ. ಈ ಹೆಸರಿನ ಛಂದಸ್ಸುಗಳಲ್ಲಿ ಒಂದು ಪಾದಕ್ಕೆ ಐದು ಅಕ್ಷರಗಳಿರುತ್ತವೆ.

ಉದಾ: **ಶ್ರೀಪತೇಃ ಪದಂ**
**ಶ್ರೀಕರಂ ಪರಂ ।**
**ಹೇ ಮನಶ್ಚಿರಂ**
**ಧ್ಯಾಯ ತದ್ವರಮ್ ॥**

**"ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞಃ"** ಎಂದು ಶ್ರುತಿ ಇದೆ.

ಯಜ್ಞದಲ್ಲಿ ಐದು ವಸ್ತುಗಳು ಮುಖ್ಯವಾಗಿ ಇರಬೇಕಾದ್ದರಿಂದ ಯಜ್ಞವೂ ಪಾಂಕ್ತ. ಪತ್ನಿ ಯಜಮಾನ, ಪುತ್ರ, ಮತ್ತು ದೈವ ಮಾನುಷವಿತ್ತಗಳು ಯಜ್ಞದಲ್ಲಿ ಪಾಂಕ್ತ. ದೈವವಿತ್ತವೆಂದರೆ ದೇವತೋಪಾಸನೆ. ಮಾನುಷವಿತ್ತವೆಂದರೆ ಧನ, ಗೋವು, ವಸ್ತ್ರ, ಘೃತಾದಿ ದ್ರವ್ಯಗಳು. ಈ ಪಂಚಸಂಖ್ಯಾಸಂಬಂಧದಿಂದ ಯಜ್ಞವು ಪಾಂಕ್ತವೆನಿಸಿತು. ಯಜ್ಞಸಂಬಂಧದಿಂದ ಸಮಸ್ತಜಗತ್ತನ್ನು ಯಜ್ಞವೆಂದು ಈ ಅನುವಾಕದಲ್ಲಿ ಶ್ರುತಿಯು ಪರಿಕಲ್ಪಿಸಿದೆ. ಪಂಕ್ತಿಚ್ಛಂದಸ್ಸು, ಯಜ್ಞಗಳೆಲ್ಲವೂ ಬ್ರಹ್ಮವಸ್ತುವಿಗೆ ಉಪಾಧಿಗಳು. ಉಪಾಧಿಗಳಿಂದ ಕೂಡಿದ ಬ್ರಹ್ಮವನ್ನು ಪ್ರಜಾಪತಿಯೆಂದು ವೇದವು ಹೇಳಿದೆ. ಈ ಸ್ಥೂಲಜಗದಾತ್ಮಕವಾದ ಬ್ರಹ್ಮವನ್ನು - ಎಂದರೆ ಪ್ರಜಾಪತಿಯನ್ನು 'ಅವನೇ ನಾನು' ಎಂದು ಉಪಾಸನೆ ಮಾಡತಕ್ಕವನು

ಪ್ರಜಾಪತಿಸ್ವರೂಪದಲ್ಲಿ ಸೇರಿಹೋಗುತ್ತಾನೆ. ಉಪಾಸನೆಗೆ ಅನುಗುಣವಾಗಿ ಅದರ ಫಲವು ದೊರೆಯುತ್ತದೆ.

ಈ ಜಗತ್ತಿನಲ್ಲಿ ಯಾವ ಯಾವ ಪಾಂಕ್ತಗಳಿವೆಯೆಂದರೆ –

೧. ಪೃಥಿವೀ, ಅಂತರಿಕ್ಷ, ದ್ಯುಲೋಕ, ದಿಕ್ಕುಗಳು, ಆಗ್ನೇಯ ಮುಂತಾದ ಅವಾಂತರ ದಿಕ್ಕುಗಳು. ಇದು ಲೋಕಪಾಂಕ್ತ.

೨. ಅಗ್ನಿ, ವಾಯು, ಆದಿತ್ಯ, ಚಂದ್ರ, ನಕ್ಷತ್ರಗಳು. ಇದು ದೇವತಾ ಪಾಂಕ್ತ.

೩. ಜಲ, ಓಷಧಿಗಳು, ವನಸ್ಪತಿಗಳು, ಆಕಾಶ, ಆತ್ಮ(ವಿರಾಟ್). ಇದು ಭೂತಪಾಂಕ್ತ.

ಇವಿಷ್ಟು ಅಧಿಭೂತ, ಅಧಿಲೋಕ ಮತ್ತು ಅಧಿದೈವತೆಗಳಿಗೆ ಸಂಬಂಧಿಸಿದ ಪಾಂಕ್ತಗಳು.

೪. ಪ್ರಾಣ, ವ್ಯಾನ, ಅಪಾನ, ಉದಾನ, ಸಮಾನ–ವಾಯುಗಳು. ಇದು ವಾಯು ಪಾಂಕ್ತ.

೫. ಚಕ್ಷು, ಶ್ರೋತ್ರ, ಮನಸ್ಸು, ವಾಕ್, ತ್ವಕ್ – ಇಂದ್ರಿಯಗಳು. ಇದು ಇಂದ್ರಿಯ ಪಾಂಕ್ತ.

೬. ಚರ್ಮ, ಮಾಂಸ, ಸ್ನಾವಾ(ನರ) ಅಸ್ಥಿ, ಮಜ್ಜಾ(ಕೊಬ್ಬು) ಇದು ಧಾತು ಪಾಂಕ್ತ.

ಐದು ಆರನೆಯ ಎರಡು ಪಾಂಕ್ತಗಳು ಅಧ್ಯಾತ್ಮಕ್ಕೆ ಸೇರಿದವು. ಆತ್ಮವೆಂದರೆ ಇಲ್ಲಿ ದೇಹ.

ಈ ಪಾಂಕ್ತರೂಪವಾದ ಜಗತ್ತಿನಿಂದ ಕೂಡಿದ ಆತ್ಮನೇ ನಾನು ಎಂದು ಯಾವಾತನು ಉಪಾಸನೆಯಿಂದ ತಿಳಿಯುತ್ತಾನೋ ಅವನು ಜಗತ್ತೆಂಬ ಉಪಾಧಿಯಿಂದ ಕೂಡಿದ ಪ್ರಜಾಪತಿಯೇ ಆಗುತ್ತಾನೆ. 'ಋಷಿರವೋಚತ್' ಎಂಬ ವಾಕ್ಯದಲ್ಲಿ ಋಷಿಯೆಂದರೆ ವೇದವೆಂದರ್ಥ. ಅಥವಾ ಪಾಂಕ್ತೋಪಾಸನೆಯ ದರ್ಶನವನ್ನು ಬಲ್ಲ ಒಬ್ಬ ಋಷಿಯೆಂದರ್ಥ. ಆತನು ಮಹಾಚಮಸ್ಯಋಷಿ. ಪಾಚೀನಯೋಗ್ಯನೆಂಬ ಶಿಷ್ಯನಿಗೆ ಹೇಳಿರಬಹುದು.

## ಅಷ್ಟಮಾನುವಾಕ.

**ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಮ್ । ಓಮಿತ್ಯೇತದನುಕೃತಿ ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯಂತಿ । ಓಮಿತಿ ಸಾಮಾನಿ ಗಾಯಂತಿ ।**

**ಓಗ್ಂ ಶೋಮಿತಿ ಶಸ್ತ್ರಾಣಿ ಶಗ್ಂಸಂತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾಪ್ರಸೌತಿ । ಓಮಿತ್ಯಗ್ನಿಹೋತ್ರಮನುಜಾನಾತಿ । ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ । ಬ್ರಹ್ಮೈವೋಪಾಪ್ನೋತಿ ॥೧॥**

ಪ್ರತೀಕಸ್ಥಾನೀಯಗಳಾದ ವ್ಯಾಹೃತಿಗಳಲ್ಲಿ ಬ್ರಹ್ಮೋಪಾಸನೆಯನ್ನು ಹೇಳಿ, ಅನಂತರ ಪಾಂಕ್ತಸ್ವರೂಪದಿಂದಲೂ ಉಪಾಸನೆಯನ್ನು ಹೇಳಲಾಯಿತು. ಸರ್ವೋಪಾಸನೆಗಳಿಗೂ ಸರ್ವಕರ್ಮಗಳಿಗೂ ಅಂಗವಾಗಿ ಓಂಕಾರವಿದ್ಯೆ ಇರುತ್ತದೆ. ಶ್ರೀಕೃಷ್ಣನು ಗೀತೆಯಲ್ಲಿ

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃ ಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥** (ಗೀತಾ.೧೭–೨೪)

ಎಂದು ಹೇಳಿದ್ದಾನೆ.

ಪ್ರಣವೋಪಾಸನೆಯಲ್ಲಿ ವಿಶೇಷವೇನೆಂದರೆ, ಪ್ರಣವವು ಅಪರಬ್ರಹ್ಮ, ಪರಬ್ರಹ್ಮ–ಇವೆರಡರ ವಾಚಕವೂ ಆಗಿದೆ. ಓಂಕಾರವನ್ನೇ ಅಪರಬ್ರಹ್ಮವೆಂದು ಹೇಳುವುದೂ ಉಂಟು. ಉಪಾಸಕನ ಯೋಗ್ಯತೆಗೆ ತಕ್ಕಂತೆ ಈ ಉಪಾಸನೆಯಿಂದ ಅಪರಬ್ರಹ್ಮವೂ ಪ್ರಾಪ್ತವಾಗಬಹುದು. ಪರಬ್ರಹ್ಮಪ್ರಾಪ್ತಿಯೂ ಆಗಬಹುದು.

ಓಂ ಎಂಬ ಶಬ್ದವು ಬ್ರಹ್ಮವೆಂದು ತಿಳಿಯಬೇಕು. ಈ ಸಮಸ್ತ ವಿಶ್ವವೂ ಓಂಕಾರವೇ. ಹೇಗೆಂದರೆ ಸಮಸ್ತ ಶಬ್ದಸ್ವರೂಪಗಳೂ ಓಂಕಾರದಿಂದ ವ್ಯಾಪ್ತವಾಗಿವೆ. ಅಭಿಧಾನತಂತ್ರಮಭಿದೇಯಂ–ಶಬ್ದಕ್ಕೆ ಅಧೀನವಾದದ್ದು ಅರ್ಥ. ಶಬ್ದಾರ್ಥಗಳಿಗೆ ಭೇದವಿಲ್ಲವೆಂಬುದೂ ಪ್ರಸಿದ್ಧ. ಆದ್ದರಿಂದ ಸಮಸ್ತವಿಶ್ವವೂ ಓಂಕಾರವೆನ್ನುವುದು ಯುಕ್ತವಾದದ್ದು.

ಹಿಂದೆ ಹೇಳಿದ ಉಪಾಸನೆಗಳಲ್ಲಿ ವ್ಯಾಹೃತಿ ಮೊದಲಾದವು ಸಾಲಗ್ರಾಮಾದಿಗಳಂತೆ ಪ್ರತೀಕಗಳು. ಉಪಾಸ್ಯದೇವತೆ ಬ್ರಹ್ಮ. ಪ್ರಣವದಲ್ಲಾದರೋ ಉಪಾಸ್ಯದೇವತೆಯೇ ಪ್ರಣವ. ಇದು ಶಬ್ದಮಾತ್ರವಾದರೂ ಫಲವನ್ನು ಕೊಡತಕ್ಕದ್ದು ಬ್ರಹ್ಮವೇ ಆಗಿರುತ್ತದೆ. ಹೀಗೆ ಇತರ ಉಪಾಸನೆಗಳಿಗೂ ಪ್ರಣವೋಪಾಸನೆಗೂ ಸ್ವಲ್ಪ ಭೇದವಿರುತ್ತದೆ.

ಮುಂದೆ ಹೇಳುವುದೆಲ್ಲವೂ ಓಂಕಾರವನ್ನು ಸ್ತುತಿಸುವುದಕ್ಕಾಗಿ. ಅಂಗೀಕಾರವನ್ನು ಸೂಚಿಸುವಾಗ 'ಓಂ' ಎಂದು ಹೇಳುತ್ತಾರೆ. ಯಜ್ಞದಲ್ಲಿ ಆಗ್ನೀಧ್ರನನ್ನು ಸಂಬೋಧಿಸುವಾಗ 'ಓಂ ಶ್ರಾವಯ' ಎಂದು ಹೇಳುತ್ತಾರೆ ಇತ್ಯಾದಿ. ಶಸ್ತ್ರ = ಶಸ್ತ್ರಶಂಸಿಗಳಾದ ಹೋತೃಗಳು.

## ನವಮಾನುವಾಕ

**ಋತಂ ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಂ ಚ ಸ್ವಾಧ್ಯಾಯ ಪ್ರವಚನೇ ಚ । ತಪಶ್ಚಸ್ವಾಧ್ಯಾಯ ಪ್ರವಚನೇ ಚ । ದಮಶ್ಚ ಸ್ವಾಧ್ಯಾಯ ಪ್ರವಚನೇ ಚ । ಶಮಶ್ಚ ಸ್ವಾಧ್ಯಾಯ ಪ್ರವಚನೇ ಚ । ಅಗ್ನಯಶ್ಚ ಸ್ವಾಧ್ಯಾಯ ಪ್ರವಚನೇ ಚ । ಅಗ್ನಿಹೋತ್ರಂ ಚ ಸ್ವಾಧ್ಯಾಯ ಪ್ರವಚನೇ ಚ । ಅತಿಥಯಶ್ಚ ಸ್ವಾಧ್ಯಾಯ ಪ್ರವಚನೇ ಚ । ಮಾನುಷಂ ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜಾ ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜನಶ್ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜಾತಿಶ್ಚ ಸ್ವಾಧ್ಯಾಯ ಪ್ರವಚನೇ ಚ । ಸತ್ಯಮಿತಿ ಸತ್ಯವಚಾ ರಾಥೀತರಃ । ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ । ತದ್ಧಿ ತಪಸ್ತದ್ಧಿ ತಪಃ ॥೧॥**

ಜ್ಞಾನದಿಂದಲೇ ಪೂರ್ವೋಕ್ತವಾದ ಸ್ವಾರಾಜ್ಯವು ಸಿದ್ಧಿಸುತ್ತದೆಯೆಂಬುದು ನಿಶ್ಚಿತವಾಯಿತು. ಹಾಗಾದರೆ ಶ್ರುತಿಸ್ಮೃತಿಗಳು ವಿಧಿಸುವ ಕರ್ಮಗಳೆಲ್ಲವೂ ನಿರರ್ಥಕಗಳಾಗಿಬಿಡುತ್ತವೆಯಲ್ಲವೆ? ಎಂಬ ಶಂಕೆ ಎದ್ದುಕೊಳ್ಳುತ್ತದೆ. ಅವು ನಿರರ್ಥಕಗಳಲ್ಲ. ಆ ಕರ್ಮಗಳು ಸ್ವಾರಾಜ್ಯಸಿದ್ಧಿಗೆ ಉಪಯುಕ್ತವಾಗುತ್ತವೆ-ಯೆಂಬುದನ್ನು ತಿಳಿಸಲು ಈ ಅನುವಾಕವು ಹೊರಟಿದೆ. ಇದರ ಅಭಿಪ್ರಾಯ ಹೀಗಿದೆ. ಕಾಮ್ಯಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಆಚರಿಸಿದರೆ ಚಿತ್ತಶುದ್ಧಿದ್ವಾರಾ ಸ್ವಾರಾಜ್ಯಪ್ರಾಪ್ತಿಗೆ ಅವು ಸಹಕಾರಿಗಳಾಗುತ್ತವೆ ಎಂದು ಹಿಂದೆ ತಿಳಿಸಿದ್ದಾರೆ. ಇನ್ನು ನಿತ್ಯಕರ್ಮಗಳನ್ನು ಆಚರಿಸದಿದ್ದರೆ ಪ್ರತ್ಯವಾಯ(ಪಾಪ) ಉಂಟು. ಉಪಾಸಕನು ನಿತ್ಯಕರ್ಮಗಳನ್ನಾಚರಿಸದೆ ಕೇವಲ ಉಪಾಸನೆಗಳಲ್ಲಿ ತೊಡಗಿದರೆ ಅದು ಫಲವನ್ನು ನೀಡುವುದಿಲ್ಲ. ನಿತ್ಯಕರ್ಮಗಳ ಅನನುಷ್ಠಾನದಿಂದ ಪ್ರಾಪ್ತವಾದ ಪ್ರತ್ಯವಾಯವು ಉಪಾಸನೆಯಿಂದಾಗುವ ಫಲವನ್ನು ಪ್ರತಿಬಂಧಿಸುತ್ತದೆ. ಆದ್ದರಿಂದ ನಿತ್ಯಕರ್ಮಗಳನ್ನಾಚರಿಸುತ್ತಿದ್ದರೆ, ಉಪಾಸನೆಯು ಚಿತ್ತಶುದ್ಧಿಗೆ ತುಂಬ ಸಹಕಾರಿಯಾಗುತ್ತದೆ. ಚಿತ್ತಶುದ್ಧಿಯಾದ ಮೇಲೆ ಆತ್ಮಜ್ಞಾನವು ಬೇಗನೆ ಫಲಿಸುತ್ತದೆ. ಆದ್ದರಿಂದ ಪ್ರತ್ಯವಾಯವು ಬಾರದಂತೆ ತಡೆಯುವುದಕ್ಕಾಗಿ ನಿತ್ಯಕರ್ಮಗಳನ್ನು ಆಚರಿಸಲೇಬೇಕು.

'ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ' ಎಂದು ಶ್ರುತಿಯೇ ಹೇಳುತ್ತದೆ. 'ಅವಿದ್ಯಯಾ=ಕರ್ಮದಿಂದ, ಮೃತ್ಯುಂ = ಮೋಕ್ಷಪ್ರತಿಬಂಧಕವಾದ ಪಾಪವನ್ನು, ತೀರ್ತ್ವಾ = ನಾಶಪಡಿಸಿ, ವಿದ್ಯಯಾ =

ಸಹಕಾರಿಯಾದ ಉಪಾಸನೆಯಿಂದ ಅಥವಾ ಕೇವಲ ಜ್ಞಾನದಿಂದ, ಅಮೃತಂ = ಮೋಕ್ಷವನ್ನು, ಅಶ್ನುತೇ = ಪಡೆಯುತ್ತಾನೆ.

**ಋತಂ ಚ ಸ್ವಾಧ್ಯಾಯ ಪ್ರವಚನೇ ಚ**

**ಋತ** = ಕರ್ತವ್ಯವೆಂದು ಶಾಸ್ತ್ರದಿಂದ ನಿಶ್ಚಿತವಾದ ಕರ್ಮ. **ಸ್ವಾಧ್ಯಾಯ** = ವೇದಶಾಸ್ತ್ರಗಳ ಅಧ್ಯಯನ, **ಪ್ರವಚನ** = ಅಧ್ಯಾಪನ. ಅಧ್ಯಾಪನವು ಶಿಷ್ಯರಿದ್ದರೆ ಮಾತ್ರ ಸಾಧ್ಯವಾಗುತ್ತದೆಯಾದ್ದರಿಂದ ಅಧ್ಯಾಪನವೆಂದರೆ ಬ್ರಹ್ಮಯಜ್ಞವೆಂದೂ ಅರ್ಥವನ್ನು ಹೇಳಬಹುದು. ಇವೆಲ್ಲವನ್ನೂ ಆಚರಿಸುತ್ತಿರಬೇಕು ಎಂದು ವಾಕ್ಯಶೇಷ. ಇದನ್ನು ಮುಂದಿನ ಪಂಕ್ತಿಗಳಲ್ಲಿಯೂ ಅನುಗುಣವಾಗಿ ಅನ್ವಯಿಸಿಕೊಳ್ಳಬೇಕು. **ದಮಃ** = ಬಾಹ್ಯೇಂದ್ರಿಯನಿಗ್ರಹ. **ಶಮಃ** = ಅಂತಃಕರಣನಿಗ್ರಹ. **ಅಗ್ನಯಃ** = ಅಗ್ನ್ಯಾಧಾನ ಮಾಡಬೇಕು. **ಅಗ್ನಿಹೋತ್ರಂ** = ಅಗ್ನಿಯಲ್ಲಿ ಹೋಮ ಮಾಡಬೇಕು. **ಮಾನುಷಂ** = ಲೌಕಿಕವ್ಯವಹಾರವನ್ನು ನಡೆಸುತ್ತಿರಬೇಕು. 'ಹಿತಮಿತಮೇಧ್ಯಾಶನಂ ತಪಃ' ಎಂದು ಯೋಗಶಾಸ್ತ್ರದಲ್ಲಿದೆ. **ಹಿತ** = ದೇಹಕ್ಕೆ ಮತ್ತು ಮನಸ್ಸಿಗೆ ಆರೋಗ್ಯಕರವಾದ ಆಹಾರ. **ಮಿತ** = ಹಸಿವು ಬಾಯಾರಿಕೆಗಳು ನೀಗುವಷ್ಟು ಮಾತ್ರ ಪರಿಮಿತ. **ಮೇಧ್ಯ** = ಶಾಸ್ತ್ರಶುದ್ಧವಾಗಿ ಶುಚಿಯಾದ ಆಹಾರ. ಇದು ತಪಸ್ಸಿನ ಒಂದು ಅಂಶ. **ಪ್ರಜಾತಿಃ** = ಪುತ್ರನನ್ನು ಜೀವನದಲ್ಲಿ ವ್ಯವಸ್ಥೆಗೊಳಿಸುವುದು.

**ರಾಥೀತರಃ** = ರಥೀತರವಂಶದ ಆಚಾರ್ಯ. **ಪೌರುಶಿಷ್ಟಿಃ** = ಪುರುಶಿಷ್ಟನ ಮಗನಾದ ಆಚಾರ್ಯ. **ನಾಕೋ ಮೌದ್ಗಲ್ಯಃ** = ಮುದ್ಗಲಗೋತ್ರದವನಾದ ನಾಕ ಎಂಬ ಹೆಸರಿನ ಆಚಾರ್ಯ. ಮತ್ತೆ ಮತ್ತೆ ಸ್ವಾಧ್ಯಾಯ ಪ್ರವಚನೇ ಚ ಎಂದು ಹೇಳಿರುವುದು ಅವೆರಡನ್ನೂ ಎಂದಿಗೂ ಬಿಡಬಾರದೆಂದು ಒತ್ತಿಹೇಳುವುದಕ್ಕಾಗಿ. ಸ್ವಾಧ್ಯಾಯವು ವೇದಶಾಸ್ತ್ರಗಳ ಅರ್ಥವನ್ನು ನೆನಪು ಮಾಡಿಕೊಡುತ್ತದೆ. ಪ್ರವಚನವು ಅರ್ಥಜ್ಞಾನವನ್ನು ದೃಢವಾಗಿ ಉಳಿಸುತ್ತದೆ. ಬ್ರಹ್ಮಯಜ್ಞವು ಧರ್ಮವನ್ನು ವರ್ಧಿಸುತ್ತದೆ.

## ದಶಮಾನುವಾಕ

**ಅಹಂ ವೃಕ್ಷಸ್ಯ ರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ । ಊರ್ಧ್ವ ಪವಿತ್ರೋ ವಾಜಿನೀವ ಸ್ವಮೃತಮಸ್ಮಿ । ದ್ರವಿಣಗ್‌ಂ ಸವರ್ಚಸಮ್ । ಸುಮೇಧಾ ಅಮೃತೋಕ್ಷಿತಃ । ಇತಿ ತ್ರಿಶಂಕೋರ್ವೇದಾನುವಚನಮ್ ॥೧॥**

ಈ ಅನುವಾಕವು ಜಪಾರ್ಥವಾಗಿ ಇಲ್ಲಿ ಬಂದಿದೆ. ಬ್ರಹ್ಮವಿದ್ಯಾ-ಪ್ರಕರಣದಲ್ಲಿ ಇದು ಉಕ್ತವಾಗಿರುವುದರಿಂದ ಇದರ ಜಪವು ಪ್ರತ್ಯವಾಯವನ್ನು

ಹೋಗಲಾಡಿಸಿ ಚಿತ್ತಶುದ್ಧಿಯನ್ನುಂಟುಮಾಡುತ್ತದೆ ಎಂದು ತಿಳಿಯಬೇಕು. ಆತ್ಮಸಾಕ್ಷಾತ್ಕಾರವನ್ನು ಪಡೆದು ಕೃತಕೃತ್ಯನಾದ ತ್ರಿಶಂಕು ಎಂಬ ಋಷಿಯ ಮಾತುಗಳಿವು.

"ಅಂತರ್ಯಾಮಿಯಾದ ನಾನು ಈ ಸಂಸಾರವೃಕ್ಷವನ್ನು ನಡೆಸತಕ್ಕವನಾಗಿದ್ದೇನೆ. ನನ್ನ ವಿಖ್ಯಾತಿಯು ಬೆಟ್ಟದ ಶಿಖರದಂತೆ ಎತ್ತರವೂ ವಿಶಾಲವೂ ಆಗಿದೆ. ನಾನು ಸಂಸಾರಸಂಬಂಧವಿಲ್ಲದೆ ಬಹು ಎತ್ತರದಲ್ಲಿದ್ದು ಪವಿತ್ರನೂ ಜ್ಞಾನಪ್ರಕಾಶ್ಯನೂ ಆಗಿದ್ದೇನೆ. **ವಾಜಿನ ಇವ** = ಸೂರ್ಯನಲ್ಲಿ ಇರುವ ಅಮೃತದಂತೆ ನಾನು ಪರಿಶುದ್ಧವಾದ ಅಮೃತವಾಗಿದ್ದೇನೆ. ದೀಪ್ತವಾದ ಅಮೃತವೆಂಬ ಧನವಾಗಿದ್ದೇನೆ. ನಾನು ಶ್ರೇಷ್ಠವಾದ ಮೇಧಾಶಕ್ತಿಯುಳ್ಳ ಸರ್ವಜ್ಞ. ನಾನು ಮರಣವಿಲ್ಲದ ಅಮೃತ. ನಾನು ಅಕ್ಷಿತ-ಅವ್ಯಯ. ಅಥವಾ **ಅಮೃತೋಕ್ಷಿತ**= ಅಮೃತದಿಂದ ಸಿಕ್ತನಾದವನು." ಇದು ತ್ರಿಶಂಕುವೆಂಬ ಜ್ಞಾನಿಯಾದ ಋಷಿಯು, ವೇದಾನುವಚನ=(ವೇದ) ಆತ್ಮಜ್ಞಾನವಾದ ಮೇಲೆ ಹೇಳಿದ ಮಾತು.

ವಿವರಣೆ - ವೃಕ್ಷವೆಂಬ ಶಬ್ದವು ಛೇದನಾರ್ಥಕವಾದ ವ್ರಶ್ಚ ಎಂಬ ಧಾತುವಿನಿಂದ ಬಂದಿದೆ. ಸಂಸಾರವೆಂಬುದು ಒಂದು ವೃಕ್ಷ. ಛೇದನಾರ್ಹವಾದದ್ದು ಎಂದರ್ಥ. ಇದನ್ನು ಪರಮಾತ್ಮನು ಲೀಲಾರ್ಥವಾಗಿ ತನ್ನ ಮಹಿಮೆಯಿಂದ ನಿರ್ಮಿಸಿದ್ದಾನೆ. ಇದನ್ನು ಕತ್ತರಿಸಿ ಹೊರಬರುವ ದಾರಿಯನ್ನು ತೋರಿಸಿದ್ದಾನೆ. ಆದರೆ ಆತನಿಗೆ ಸಂಸಾರದ ಸ್ಪರ್ಶವು ಸ್ವಲ್ಪವೂ ಇಲ್ಲ. ಅವನು ಪರಿಶುದ್ಧನಾಗಿ ನಿರಂಜನನಾಗಿದ್ದಾನೆ.

ವಾಜ ಎಂದರೆ ಅನ್ನ. ವಾಜಿ ಎಂದರೆ ಸೂರ್ಯನೆಂದರ್ಥ. ಇದೊಂದು ವೇದದಲ್ಲಿ ರೂಢವಾದ ಶಬ್ದ. "ಸಯಶ್ಚಾಯಂ ಪುರುಷೇ । ಯಶ್ಚಾಸಾ ವಾದಿತ್ಯೇ । ಸ ಏಕಃ" ಇತ್ಯಾದಿ ಶ್ರುತಿಗಳು ಮನುಷ್ಯನಲ್ಲಿಯೂ ಸೂರ್ಯನಲ್ಲಿಯೂ ಇರುವ ಆತ್ಮತತ್ತ್ವವು ಒಂದೇ ಎಂದು ತಿಳಿಸುತ್ತವೆ. **ರೇರಿವಾ** = ಗತ್ಯರ್ಥಕ ರಿವಿ ಧಾತುವಿನ ಯಙ್ ಲುಗಂತದ ಮೇಲೆ ಕರ್ತರಿ ಅಚ್ ಪ್ರತ್ಯಯ. ಅದಕ್ಕೆ ಛಾಂದಸವಾದ ದೀರ್ಘ. ಇದು ಪವಿತ್ರವಾದ ಮಂತ್ರಾಮ್ನಾಯ. ಮುಮುಕ್ಷುವು ಇದನ್ನು ಜಪಿಸುತ್ತಿರಬೇಕು.

## ಏಕಾದಶಾನುವಾಕ

**ವೇದಮನೂಚ್ಯಾಚಾರ್ಯೋಽಂತೇವಾಸಿನಮನುಶಾಸ್ತಿ । ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾರ್ಯಾಯ ಪ್ರಿಯಂ**

**ಧನಮಾಹೃತ್ಯ ಪ್ರಜಾತಂತುಂ ಮಾವ್ಯವಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಮ್ । ಧರ್ಮಾನ್ನ ಪ್ರಮದಿತವ್ಯಮ್ । ಕುಶಲಾನ್ನ ಪ್ರಮದಿತವ್ಯಮ್ । ಭೂತ್ಯೈ ನ ಪ್ರಮದಿತವ್ಯಮ್ । ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್ ॥೧॥**

ಬ್ರಹ್ಮಜ್ಞಾನವಾಗುವುದಕ್ಕೆ ಮೊದಲು ಶ್ರೌತಸ್ಮಾರ್ತಕರ್ಮಗಳನ್ನು ಮಾನುಷವಾದ ಲೋಕವ್ಯವಹಾರವನ್ನು ಮಾಡಲೇಬೇಕು. ಹಿಂದೆ ಹೇಳಿದ ಕರ್ತವ್ಯಗಳನ್ನು ನೆನಪುಮಾಡಿಕೊಳ್ಳುವುದಲ್ಲದೆ ಇನ್ನು ಕೆಲವು ವಿಷಯಗಳನ್ನು ಸೇರಿಸಿ ಎಲ್ಲವನ್ನೂ ಇಲ್ಲಿ ಉಪದೇಶಿಸಲಾಗುವುದು. "ವೇದಮನೂಚ್ಯ" ಎನ್ನುವುದು ಇತರ ಶಾಸ್ತ್ರಗಳಿಗೂ ಉಪಲಕ್ಷಣ. ಗುರುಕುಲದಲ್ಲಿ ಕಲಿಯಬೇಕಾದ್ದೆಲ್ಲವನ್ನೂ ಕಲಿತು ಮನೆಗೆ ಹಿಂದಿರುಗುವ ಶಿಷ್ಯನಿಗೆ ಆಚಾರ್ಯನು ಹೇಳುವ ಉಪದೇಶವಿದು. ಸರ್ವಗೃಹಸ್ಥರಿಗೂ ಇದು ಅನ್ವಯಿಸುತ್ತದೆ. ಗುರುಕುಲದಿಂದ ಬಂದಮೇಲೆ, ಬ್ರಹ್ಮಜ್ಞಾನವಾಗುವುದಕ್ಕೆ ಮೊದಲು ಆತನು ಮದುವೆಯಾಗಿ ಗೃಹಸ್ಥಧರ್ಮವನ್ನು ಪಾಲಿಸಬೇಕಾಗುತ್ತದೆ. **ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ** – ಎಂಬ ಆದೇಶದ ತಾತ್ಪರ್ಯವೇ ಇದು. 'ಅನಾಶ್ರಮೀ ನ ತಿಷ್ಠೇತ' ಎಂದು ಸ್ಮೃತಿವಚನವಿದೆ. 'ತಪಸಾ ಕಲ್ಮಷಂ ಹಂತಿ ವಿದ್ಯಯಾಮೃತಮಶ್ನುತೇ' ಎಂಬ ಸ್ಮೃತಿವಚನದಲ್ಲಿ ತಪಸ್ಸೆಂದರೆ ಶಾಸ್ತ್ರೋಕ್ತವಾದ ಕರ್ಮವೆಂದರ್ಥ. 'ತಪಸಾಬ್ರಹ್ಮವಿಜಿಜ್ಞಾಸಸ್ವ' ಎಂದು ಭೃಗುವಲ್ಲಿಯಲ್ಲಿ ಹೇಳಿದ ತಪಃ ಶಬ್ದಕ್ಕೆ ತತ್ತ್ವಚಿಂತನೆಯೆಂದರ್ಥ. ಹೀಗೆ ತಪಃ ಶಬ್ದವು ಅನೇಕಾರ್ಥಗಳನ್ನೊಳಗೊಂಡಿದೆ.

**ಕುಶಲಾನ್ನಪ್ರಮದಿತವ್ಯಮ್** = ಕುಶಲವೆಂದರೆ ಆತ್ಮರಕ್ಷಣೆ. ರೋಗಬಂದರೆ ಚಿಕಿತ್ಸೆಯಿಂದ ಗುಣಪಡಿಸಿಕೊಳ್ಳಬೇಕು – ಮುಂತಾದ ಅಂಶಗಳು ಇಲ್ಲಿ ಸೂಚಿತವಾಗಿವೆ. ಆರೋಗ್ಯವನ್ನು ಕಾಪಾಡಿಕೊಳ್ಳಬೇಕೆಂದು ತಾತ್ಪರ್ಯ. **ಭೂತ್ಯೈ ನ ಪ್ರಮದಿತವ್ಯಮ್** = ಭೂತಿ–ಮಂಗಳಕರವಾದ ಶುಭಕಾರ್ಯ ಮತ್ತು ಧನಸಂಪಾದನೆ ಇವನ್ನು ಎಂದಿಗೂ ಉಪೇಕ್ಷಿಸಬಾರದು.

**ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ಮಾತೃದೇವೋ ಭವ । ಪಿತೃದೇವೋ ಭವ । ಆಚಾರ್ಯದೇವೋ ಭವ । ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ । ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ ॥೨॥**

ಮಾತಾ ದೇವೋ ಯಸ್ಯ ಸಃ ಮಾತೃದೇವಃ ಎಂದು ವಿಗ್ರಹವಾಕ್ಯ. ತಾಯಿ ತಂದೆ ಮೊದಲಾದವರನ್ನು ದೇವತೆಗಳಂತೆ ಸೇವಿಸು ಎಂದರ್ಥ. ಅನವದ್ಯ = ನಿಂದಿತವಲ್ಲದ.

**ನೋ ಇತರಾಣಿ । ಯೇ ಕೇ ಚಾಸ್ಮಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ । ತೇಷಾಂ ತ್ವಯಾಸನೇನ ಪ್ರಶ್ವಸಿತವ್ಯಮ್ । ಶ್ರದ್ಧಯಾ ದೇಯಮ್ । ಅಶ್ರದ್ಧಯಾದೇಯಮ್ । ಶ್ರಿಯಾ ದೇಯಮ್ । ಹ್ರಿಯಾ ದೇಯಮ್ । ಭಿಯಾ ದೇಯಮ್ । ಸಂವಿದಾ ದೇಯಮ್ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ ಸ್ಯಾತ್ ॥೩॥**

ಆಸನೇನ = ಕುಳಿತುಕೊಳ್ಳಲು ಆಸನಾದಿಗಳನ್ನು ಕೊಟ್ಟು, ಪ್ರಶ್ವಸಿತವ್ಯಮ್ = ಶ್ರಮವನ್ನು ಹೋಗಲಾಡಿಸಬೇಕು. ಶ್ರಿಯಾ ದೇಯಮ್ = ನಿನ್ನ ಸಂಪತ್ತಿಗೆ ಅನುಗುಣವಾಗಿ ದಾನ ಮಾಡಬೇಕು. ದಾನದಲ್ಲಿ ಲೋಭವನ್ನು (ಚೌಕಾಸಿಯನ್ನು) ಮಾಡಬಾರದು ಎಂದು ಅಭಿಪ್ರಾಯ. ಹ್ರಿಯಾ ದೇಯಮ್ = ಅಧಿಕವಾಗಿ ದಾನಮಾಡುವಾಗಲೂ ಸಹ 'ನಾನು ಕೊಡುವುದು ಸ್ವಲ್ಪವೇ' ಎಂದು ಸಂಕೋಚಪಡುತ್ತಲೇ ದಾನ ಮಾಡಬೇಕು. ಭಿಯಾ ದೇಯಮ್ = ಶಾಸ್ತ್ರವಿಧಿಗೆ ಲೋಪವಾದೀತೆಂದು ಹೆದರುತ್ತ ಕೊಡಬೇಕು. ಸಂವಿದಾ ದೇಯಮ್ = ಬಂಧುಮಿತ್ರರ ಕಾರ್ಯನಿಮಿತ್ತದಿಂದಲೂ ಕೊಡಬೇಕು. ಸಂವಿತ್ = ಬಂಧುಮಿತ್ರರ ಕಾರ್ಯವೆಂಬ ತಿಳಿವಳಿಕೆ.

ಕರ್ಮ = ಶಾಸ್ತ್ರೀಯ ಕರ್ಮ. ವೃತ್ತ = ಆಚಾರ, ನಡವಳಿಕೆ, ವಿಚಿಕಿತ್ಸಾ = ಸಂಶಯ.

**ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾತೇಷು । ಯೇತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ । ಏಷ ಆದೇಶಃ । ಏಷ ಉಪದೇಶಃ । ಏಷಾ ವೇದೋಪನಿಷತ್ । ಏತದನುಶಾಸಮ್ । ಏವಮುಪಾಸಿತವ್ಯಮ್ । ಏವಮುಚೈತದುಪಾಸ್ಯಮ್ ॥೪॥**

**ಸಂಮರ್ಶಿನಃ** = ವಿಚಾರಶೀಲರು. **ಯುಕ್ತಾಃ** = ವಿಧಿವತ್ತಾಗಿ ಕರ್ಮಾನುಷ್ಠಾನ ಮಾಡತಕ್ಕವರು. **ಆಯುಕ್ತಾಃ** = ಅನ್ಯರ ಪ್ರೇರಣೆಗೆ ಒಳಗಾಗದಿರುವ ಸ್ವತಂತ್ರರು. **ಅಲೂಕ್ಷಾ** = ರೂಕ್ಷರಲ್ಲದ ಸಾಧುಜನರು. **ಅಭ್ಯಾಖ್ಯಾತೇಷು** = ಜನರು ಏನನ್ನೋ ಹೇಳಿದ್ದರಿಂದ ಸಂದಿಗ್ಧವಾದ ವಿಷಯಗಳಲ್ಲಿ.

**ಆದೇಶ** = ವಿಧಿ, ಆಜ್ಞೆ, **ಉಪದೇಶ** = ಹಿತವಚನ. **ವೇದೋಪನಿಷತ್** = ವೇದರಹಸ್ಯ–ವೇದದ ತಾತ್ಪರ್ಯ. **'ಏವಮುಚೈತದುಪಾಸ್ಯಮ್'** ಎಂಬುದು ಆದರಾರ್ಥವಾದ ಪುನರುಕ್ತಿ. ಹೀಗೆ ನಡೆಯಲು ವಿಶೇಷವಾಗಿ ಪ್ರಯತ್ನಿಸಬೇಕು ಎಂದು ಅಭಿಪ್ರಾಯ.

ಜ್ಞಾನ–ಕರ್ಮಗಳ ವಿಷಯದಲ್ಲಿ ಒಂದು ವಿವಾದವಿದೆ. ಜ್ಞಾನದಿಂದಲೇ ಮೋಕ್ಷ, ಕರ್ಮದಿಂದಲೇ ಮೋಕ್ಷ, ಜ್ಞಾನಸಹಿತವಾದ ಕರ್ಮದಿಂದ ಮೋಕ್ಷ, ಕರ್ಮಸಹಿತವಾದ ಜ್ಞಾನದಿಂದ ಮೋಕ್ಷ– ಇತ್ಯಾದಿ ವಿವಾದಗಳು. ಇದನ್ನೀಗ ವಿಸ್ತಾರವಾಗಿ ವಿವೇಚಿಸಲು ಇದು ಸ್ಥಳವಲ್ಲ. ಸಂಕ್ಷೇಪವಾಗಿ ಈ ವಾದಗಳ ತಿರುಳನ್ನು ಇಲ್ಲಿ ನಿರೂಪಿಸಲಾಗುವುದು.

ಕರ್ಮದಿಂದ ಮೋಕ್ಷ, ಜ್ಞಾನದಿಂದ ಮೋಕ್ಷ–ಎಂಬ ಎರಡು ಪಕ್ಷಗಳು ಮುಖ್ಯವಾದವು. ಉಳಿದವು ಇವೆರಡರ ಅಂತರ್ಭೇದಗಳು. ಕರ್ಮಾಚರಣೆಯಿಂದಲೇ ಮೋಕ್ಷವು ದೊರೆಯುತ್ತದಯೆಂದು ಪೂರ್ವಪಕ್ಷ.

**'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ'** ಎಂದು ಧರ್ಮಶಾಸ್ತ್ರವಿದೆ. ದ್ವಿಜನು ಉಪನಿಷತ್‌ಸಹಿತವಾಗಿ ಸಮಸ್ತವೇದ ವೇದಾರ್ಥಗಳನ್ನೂ ಅಧ್ಯಯನ ಮಾಡಬೇಕು. ಇದರಿಂದ ಪ್ರತಿಯೊಬ್ಬ ವಿಪ್ರನೂ ವೇದಾಂತವನ್ನೂ(ಉಪನಿಷತ್ತನ್ನೂ) ಅಭ್ಯಾಸಮಾಡಿ ಆತ್ಮಜ್ಞಾನವನ್ನು ಪಡೆದಿರಬೇಕು ಎಂದು ಸಿದ್ಧವಾಗುತ್ತದೆ. ಇಂತಹ ವಿದ್ವಾಂಸನೇ ಯಜನ–ಯಾಜನಕರ್ಮಗಳಲ್ಲಿ ಅಧಿಕಾರಿಯೆಂದು **"ವಿದ್ವಾನ್ ಯಜತೇ" "ವಿದ್ವಾನ್ ಯಾಜಯತಿ"** ಇತ್ಯಾದಿ ಶ್ರುತಿವಾಕ್ಯಗಳು ತಿಳಿಸುತ್ತವೆ. **"ಜ್ಞಾತ್ವಾನುಷ್ಠಾನಮ್"** ಇತ್ಯಾದಿ ಸ್ಮೃತಿಗಳೂ ಸಹ ವೇದಾರ್ಥವನ್ನು ತಿಳಿದೇ ಕರ್ಮಾನುಷ್ಠಾನವನ್ನು ಮಾಡಬೇಕೆಂದು ಹೇಳುತ್ತವೆ. ವೇದವೇ ಪರಮಪುರುಷಾರ್ಥವಾದ ಮೋಕ್ಷವನ್ನು ಪಡೆಯಲು ಸಾಧನ. ವೇದಾಂತವನ್ನು ಬಲ್ಲವನೂ ಕರ್ಮಾನುಷ್ಠಾನವನ್ನು ಮಾಡಬೇಕೆಂದು ಪೂರ್ವೋಕ್ತವಾದ ಪ್ರಮಾಣಗಳಿಂದ ಸಿದ್ಧವಾಗುವುದರಿಂದ ಕರ್ಮದಿಂದಲೇ ಮೋಕ್ಷವೆಂಬುದು ನಿಶ್ಚಿತ. ಇಲ್ಲದಿದ್ದರೆ ವೇದವೆಲ್ಲವೂ ನಿರರ್ಥಕವೆಂದಾಗಿ ಬಿಟ್ಟೀತು.

ಹಾಗಲ್ಲ; ಮೋಕ್ಷವು ನಿತ್ಯವಾದದ್ದೆಂದು ಸರ್ವರೂ ಅಂಗೀಕರಿಸಿದ್ದಾರೆ. ಮುಕ್ತನಾದವನಿಗೆ ಮತ್ತೆ ಜನ್ಮಮರಣಗಳಿಲ್ಲವೆಂದು ವೇದವೇ ಸಾರಿ ಹೇಳಿದೆ. ಬ್ರಹ್ಮಸೂತ್ರದ ಕಡೆಯಲ್ಲಿ **"ಅನಾವೃತ್ತಿಃ ಶಬ್ದಾತ್"** ಎಂದು ಬಾದರಾಯಣರು ಘೋಷಿಸಿದ್ದಾರೆ. ಶಬ್ದಾತ್ = ಶ್ರುತಿವಚನದಿಂದಲೇ ಅನಾವೃತ್ತಿಃ = ಬ್ರಹ್ಮಜ್ಞಾನಿಗೆ

ಪುನರ್ಜನ್ಮವಿಲ್ಲವೆಂದು ಇದರ ತಾತ್ಪರ್ಯ. ಕರ್ಮದಿಂದ ಮೋಕ್ಷವು ಹುಟ್ಟುವುದಾದರೆ ಅದು ನಿತ್ಯವಾಗದು. "ಜಾತಸ್ಯಮರಣಂ ಧ್ರುವಮ್, ಯತ್ ಕೃತಕಂ ತದನಿತ್ಯಮ್" ಇತ್ಯಾದಿ ವಚನಗಳಿಂದ ಹುಟ್ಟಿದ ವಸ್ತುವಿಗೆ ಸಾವು ಬಂದೇ ಬರುತ್ತದೆಯೆಂದು ನಿರ್ಣಯವಾಗಿದೆ. ಕರ್ಮದಿಂದ ಮೋಕ್ಷವಾಗುತ್ತದೆ ಎಂದರೆ ಕ್ರಿಯೆಯಿಂದ ಹೊಸದಾಗಿ ಮುಕ್ತಿಬರುತ್ತದೆ ಎಂದು ಒಪ್ಪಿಕೊಂಡಂತಾಗುವುದು. ಆಗ ಮುಕ್ತಿಯು ಹೊಸದಾಗಿ ಹುಟ್ಟುತ್ತದೆ ಎಂದಂತಾಯಿತು.

ಒಳ್ಳೆಯದು. ಮುಕ್ತನಿಗೆ ಪುನರ್ಜನ್ಮವಿಲ್ಲವೆಂದು ಒಪ್ಪೋಣ. ಅದು ಕರ್ಮಾಚರಣೆಯಿಂದ ಸಿದ್ಧಿಸುತ್ತದೆ. ನಾವು ಮಾಡಿದ ಪಾಪಪುಣ್ಯಗಳ ಫಲವನ್ನು ಅನುಭವಿಸುವುದಕ್ಕಾಗಿ ಜನ್ಮಬರುತ್ತದೆ. ಮುಮುಕ್ಷುವಾದವನು ಯಾವ ಕಾಮ್ಯಕರ್ಮವನ್ನೂ ಮಾಡುವುದಿಲ್ಲ. ನಿಷಿದ್ಧವಾದ ಪಾಪಕಾರ್ಯವನ್ನೂ ಮಾಡುವುದಿಲ್ಲ. ಆದ್ದರಿಂದ ಮುಂದಿನ ಜನ್ಮಕ್ಕೆ ನಿಮಿತ್ತವಿರುವುದಿಲ್ಲ. ಹಿಂದಿನ ಪಾಪಪುಣ್ಯಗಳ ಫಲವನ್ನು ಈ ಜನ್ಮದಲ್ಲಿ ಅನುಭವಿಸಿ ತೀರಿಸುತ್ತಾನೆ. ಕರ್ಮಶೇಷ ಯಾವುದೂ ಉಳಿಯುವುದಿಲ್ಲ. ಈ ಜನ್ಮದಲ್ಲಿ ನಿತ್ಯನೈಮಿತ್ತಿಕ ಕರ್ಮಗಳನ್ನು ಯಥಾವತ್ತಾಗಿ ಆಚರಿಸುವುದರಿಂದ ಜನ್ಮಾಂತರಕ್ಕೆ ಕಾರಣವಾದ ದುರಿತವೂ ಬರುವುದಿಲ್ಲ. ಜನ್ಮಾಂತರಪ್ರಾಪ್ತಿಗೆ ನಿಮಿತ್ತವೇ ಉಳಿಯುವುದಿಲ್ಲವಾದ್ದರಿಂದ ಪುನರ್ಜನ್ಮವಿರುವುದಿಲ್ಲ. ಇನ್ನೇನಾಗಬೇಕು? ಪುನರ್ಜನ್ಮವಿಲ್ಲದಿರುವುದೇ ಮೋಕ್ಷ.

ಕೇಳಲು ಈ ಹೇಳಿಕೆ ಚೆನ್ನಾಗಿದೆ! ಎಷ್ಟೋ ಜನ್ಮಗಳ ಕರ್ಮಗಳು ಮನುಷ್ಯನಿಗೆ ಗಂಟುಬಿದ್ದಿರುತ್ತವೆ. ಅವುಗಳಲ್ಲಿ ಒಂದೆರಡು ಕರ್ಮಗಳ ಫಲವನ್ನು ಭೋಗಿಸುವುದಕ್ಕಾಗಿ ಈ ವರ್ತಮಾನ ಜನ್ಮ ಬಂದಿರುತ್ತದೆ. ಈ ಜನ್ಮಕ್ಕೆ ಕಾರಣವಾದದ್ದು ಪ್ರಾರಬ್ಧಕರ್ಮ. ನಮ್ಮ ಚೀಲದಲ್ಲಿ ಸಂಚಿತವಾದ ಇನ್ನೆಷ್ಟೋ ಕರ್ಮಗಳು ತುಂಬಿಕೊಂಡಿರುತ್ತವೆ. ಒಂದು ಜನ್ಮದಲ್ಲಿ ಅವೆಲ್ಲವನ್ನೂ ಅನುಭವಿಸಿ ತೀರಿಸುತ್ತೇವೆ ಎಂಬುದು ಸುಳ್ಳು. ಮತ್ತು ಮನುಷ್ಯನಾಗಿ ಹುಟ್ಟಿದ ಮೇಲೆ ಮಾಡುವ ವ್ಯವಹಾರದಲ್ಲಿ ಪಾಪವೋ ಪುಣ್ಯವೋ ಸಂಘಟಿಸುತ್ತದೆ. ನಿತ್ಯಕರ್ಮಾಚರಣೆ ಚಾಚೂ ತಪ್ಪದೆ ನಡೆಯುವುದೂ ಕಷ್ಟವೇ. ನಿತ್ಯಕರ್ಮಾಚರಣೆಯಿಂದ ಪ್ರಾಚೀನಕರ್ಮವು ಸವೆಯುವುದಿಲ್ಲ. ಚಿತ್ತಶುದ್ಧಿಯು ಮಾತ್ರ ಆಗಬಹುದು.

ಹಾಗಾದರೆ ವೇದಃ ಕೃತ್ಸ್ನೋಽಧಿಗಂತವ್ಯಃ ಇತ್ಯಾದಿ ವಚನಗಳಿರುವುದರಿಂದ ಉಪನಿಷದರ್ಥವನ್ನೂ ಬಲ್ಲ ವೇದಾಂತಿಯಾದ ವಿದ್ವಾಂಸನಿಗೆ 'ವಿದ್ವಾನ್ ಯಜತೇ' ಇತ್ಯಾದಿ ವಚನಬಲದಿಂದ ಕರ್ಮಾಧಿಕಾರ ಉಂಟು– ಎಂಬ ನಿರ್ಣಯಕ್ಕೆ ಸಮಾಧಾನವೇನು?

ಹಾಗಲ್ಲ; ಗುರುಕುಲದಿಂದ ನಿರ್ಗಮಿಸುವಾಗ ಶಿಷ್ಯನಿಗೆ ಉಪನಿಷದರ್ಥವನ್ನು ಆಚಾರ್ಯನು ಹೇಳಿರುತ್ತಾನೆ. ಶಿಷ್ಯನಿಗೆ ಪ್ರಾಪ್ತವಾದದ್ದು ಬರಿಯ ಶಬ್ದಾರ್ಥಜ್ಞಾನ. 'ಶ್ರೋತವ್ಯಃ' ಎಂಬ ಅಂಶವು ಮಾತ್ರ ನಡೆದಿರುತ್ತದೆ. "ಮಂತವ್ಯಃ, ನಿದಿಧ್ಯಾಸಿತವ್ಯಃ" ಎಂದೂ ಇದೆಯಲ್ಲವೆ? ಮನನ ನಿದಿಧ್ಯಾಸನಗಳೂ ಆದಮೇಲೆ ಯಾವನೋ ಒಬ್ಬ ಪುಣ್ಯಾತ್ಮನಿಗೆ ಪ್ರಾಪ್ತವಾಗುವ ಆತ್ಮಜ್ಞಾನವು ಬ್ರಹ್ಮವಿದ್ಯೆಯೆನಿಸುತ್ತದೆ. ಅದರಿಂದ ಮಾತ್ರ ಮೋಕ್ಷವು ಪ್ರಾಪ್ತವಾಗುತ್ತದೆ.

ಹಾಗಾದರೆ ಆತ್ಮಜ್ಞಾನಸಹಿತವಾದ ಕರ್ಮದಿಂದ ಮೋಕ್ಷವೆನ್ನೋಣ. ಆಗ ಶ್ರುತಿಯು ಕರ್ಮವನ್ನು ವಿಧಿಸಿದ್ದು ಸಾರ್ಥಕವಾಗುತ್ತದೆ. ಮೋಕ್ಷವು ಕರ್ಮಜನ್ಯವಾದರೂ ಜ್ಞಾನದ ಸಹಕಾರವಿರುವುದರಿಂದ ನಿತ್ಯವಾಗುತ್ತದೆ. 'ಅನಾವೃತ್ತಿಃ ಶಬ್ದಾತ್' ಎಂದು ಬ್ರಹ್ಮಸೂತ್ರವು ಹೇಳಿದೆಯಷ್ಟೆ.

ಇದು ಯುಕ್ತವಾದ ಮಾತಲ್ಲ. ಜ್ಞಾನದ ಸಹಕಾರವಿದ್ದಮಾತ್ರದಿಂದ ಕರ್ಮಜನ್ಯವಾದದ್ದು ನಿತ್ಯವಾಗಿ ಬಿಡುವುದಿಲ್ಲ. "ಜನ್ಯವಾದದ್ದೆಲ್ಲವೂ ಅನಿತ್ಯ' ಎಂಬುದು ಸಾರ್ವತ್ರಿಕವಾದ ನಿಯಮ. "ಅನಾವೃತ್ತಿಃ ಶಬ್ದಾತ್" ಎಂಬ ಸೂತ್ರವು ಮುಕ್ತನಿಗೆ ಪುನರ್ಜನ್ಮವಿಲ್ಲ ಎಂಬ ಸತ್ಯವನ್ನು ಜ್ಞಾಪಿಸುತ್ತದೆ. ಇರುವುದನ್ನು ತಿಳಿಸುತ್ತದೆ. ಅಷ್ಟೇ ಹೊರತು ಜನ್ಯವಾದರೂ ನಿತ್ಯವಾಗುತ್ತದೆ ಎಂದು ಹೇಳಿಲ್ಲ. ಒಂದು ವೇಳೆ ಹಾಗೆ ನೂರು ಜನ ಹೇಳಿದರೂ ಜನ್ಯವು ನಿತ್ಯವಾಗಿ ಬಿಡುವುದಿಲ್ಲ. "ಜಾತಸ್ಯ ಮರಣಂ ಧ್ರುವಮ್" ಎಂಬುದು ಸಾರ್ವತ್ರಿಕ ನಿಯಮ.

ಅವಿದ್ಯಾನಿವೃತ್ತಿಯಾದರೆ ಮೋಕ್ಷಪ್ರಾಪ್ತಿಯೆಂದು ನೀವು ಹೇಳುತ್ತೀರಿ. ಜ್ಞಾನಕರ್ಮಗಳೆರಡೂ ಸೇರಿ, ಮೋಕ್ಷಪ್ರತಿಬಂಧಕವಾದ ಅವಿದ್ಯೆಯನ್ನು ನಾಶಪಡಿಸುತ್ತವೆಯೆನ್ನುತ್ತೇವೆ. ಆಗ ಕರ್ಮವು ಮೋಕ್ಷಜನಕವೆಂದು ಸಿದ್ಧವಾಗುತ್ತದೆಯಲ್ಲವೆ?

ಅಯ್ಯಾ ಕರ್ಮಠ! ಅವಿದ್ಯೆಯೆಂದರೆ ಅಜ್ಞಾನ. ಅದನ್ನು ನಾಶಪಡಿಸಲು ಜ್ಞಾನವೊಂದೇ ಸಾಕು. ಕರ್ಮದ ಅಪೇಕ್ಷೆಯೇ ಇಲ್ಲ. ವಸ್ತುಸ್ಥಿತಿಯನ್ನು ಸರಿಯಾಗಿ ತಿಳಿದುಕೋ. ಕರ್ಮದಿಂದ (ಕ್ರಿಯೆಯಿಂದ) ಆಗತಕ್ಕ ಫಲಗಳು ನಾಲ್ಕು ಮಾತ್ರ. ಉತ್ಪತ್ತಿ, ಸಂಸ್ಕಾರ, ವಿಕಾರ, ಪ್ರಾಪ್ತಿ. ಇವು ನಾಲ್ಕು ಫಲಗಳು.

ಉದಾ:

೧. ಕುಂಬಾರನು ಗಡಿಗೆಯನ್ನು ಮಾಡುತ್ತಾನೆ. ಇಲ್ಲಿ ಗಡಿಗೆಯ ಉತ್ಪತ್ತಿ ಕ್ರಿಯಾಫಲ.

೨. ತಂದೆಯು ಮಗನಿಗೆ ನಾಮಕರಣವನ್ನು ಮಾಡುತ್ತಾನೆ. ನಾಮಕರಣವು ಒಂದು ಸಂಸ್ಕಾರ.
೩. ಕಟ್ಟಿಗೆಯನ್ನು ಸುಟ್ಟು ಬೂದಿಮಾಡುತ್ತಾನೆ. ಬೂದಿ ಕಟ್ಟಿಗೆಯ ವಿಕಾರ.
೪. ಅವನು ಹಳ್ಳಿಗೆ ಹೋಗುತ್ತಾನೆ. ಹಳ್ಳಿಯ ಪ್ರಾಪ್ತಿ ಕ್ರಿಯಾಫಲ.

ಎಲ್ಲ ವೈದಿಕಕರ್ಮಗಳಿಗೂ ಲೌಕಿಕಕ್ರಿಯೆಗಳಿಗೂ ಇವು ನಾಲ್ಕೇ ಫಲಗಳು. ಈ ಯಾವ ಫಲವೂ ಮೋಕ್ಷದಲ್ಲಿಲ್ಲ. "ಸ್ವಸ್ವರೂಪೇಣ ಅವಸ್ಥಾನಂ ಮೋಕ್ಷಃ" ಬ್ರಹ್ಮಸ್ವರೂಪವೇ ಮೋಕ್ಷ. ಬ್ರಹ್ಮವು ನಿತ್ಯವಾದ್ದರಿಂದ ಉತ್ಪತ್ತಿ ಇಲ್ಲ. ನಿರ್ದೋಷವಾದ್ದರಿಂದ ಸಂಸ್ಕರಿಸಬೇಕಾದ್ದಿಲ್ಲ. ಬ್ರಹ್ಮವು ಆಕಾಶದಂತೆ ಸರ್ವಗತವೂ ನಿರಾಕಾರವೂ ಅದ್ದರಿಂದ ವಿಕಾರಗಳು ಅದರಲ್ಲಿ ಸಂಭವಿಸುವುದೇ ಇಲ್ಲ. ಸರ್ವಗತವಾದ್ದರಿಂದ ಪ್ರಾಪ್ತಿಯಾಗಬೇಕಾದದ್ದೂ ಇಲ್ಲ.

ಹಾಗಾದರೆ ವೇದಗಳು ಕರ್ಮಗಳನ್ನೇಕೆ ವಿಧಿಸಿವೆ? ಕರ್ಮಗಳು ನಿಷ್ಫಲಗಳಾಗಿ ಬಿಡುತ್ತವೆಯಲ್ಲವೆ?

ಪರಿಸ್ಥಿತಿ ಏನೆಂದರೆ, ಕರ್ಮಗಳು ನಿಷ್ಫಲಗಳಲ್ಲ. ಲೋಕದಲ್ಲಿ ನಾನಾಬಗೆಯ ಜನರಿರುತ್ತಾರೆ. ಯಾರು ಧನ, ಸುತ, ಪಶು, ಆಯುಸ್ಸು, ಸ್ವರ್ಗ ಮುಂತಾದ ಫಲಗಳನ್ನು ಬಯಸುತ್ತಾರೋ ಅವರಿಗಾಗಿ ಕಾಮ್ಯಗಳು ವಿಹಿತವಾಗಿವೆ. ಯಾರು ದುರಿತಕ್ಷಯದ್ವಾರಾ ಚಿತ್ತಶುದ್ಧಿಯನ್ನು ಬಯಸುತ್ತಾರೋ ಅವರಿಗಾಗಿ ನಿತ್ಯನೈಮಿತ್ತಿಕಕರ್ಮಗಳು ವಿಹಿತವಾಗಿವೆ. ಫಲಾಪೇಕ್ಷೆಯಿಲ್ಲದೆ ಈಶ್ವರಪ್ರೀತ್ಯರ್ಥವಾಗಿ ಮಾಡುವ ಸಕಲ ಕರ್ಮಗಳೂ ಚಿತ್ತಶುದ್ಧಿದ್ವಾರಾ ಮೋಕ್ಷಫಲವನ್ನು ನೀಡಲು ಸಹಕಾರಿಗಳಾಗುತ್ತವೆ. ಇದನ್ನು ಹಿಂದೆ ತಿಳಿಸಿದ್ದಾಗಿದೆ. ಮೋಕ್ಷವು ಮಾತ್ರ ಜ್ಞಾನದಿಂದಲೇ ಎಂಬುದು ಸಿದ್ಧಾಂತ.

ಪ್ರಕರಣಶುದ್ಧಿಗಾಗಿ ಇನ್ನು ಕೆಲವು ವಿಷಯಗಳನ್ನು ಇಲ್ಲಿ ನಿರೂಪಿಸಬಹುದು.

**'ಆಮ್ನಾಯಸ್ಯ ಕ್ರಿಯಾರ್ಥತ್ವಾತ್ ಆನರ್ಥಕ್ಯಮತದರ್ಥಾನಾಮ್'** ಎಂಬ ಜೈಮಿನಿಸೂತ್ರವನ್ನು ಆಧಾರವಾಗಿಟ್ಟುಕೊಂಡು, ಮೀಮಾಂಸಕರು 'ವೇದವು ಕ್ರಿಯೆಯನ್ನು (ಕರ್ಮವನ್ನು) ಬೋಧಿಸುವುದಕ್ಕಾಗಿಯೇ ಹೊರಟಿದೆಯೆಂದೂ ಕ್ರಿಯೆಯನ್ನು ಬೋಧಿಸದವಾಕ್ಯಗಳು ನಿರರ್ಥಕಗಳೆಂದೂ ಹೇಳುತ್ತಾರೆ. ವೇದಾಂತಿಗಳು ಇದನ್ನೊಪ್ಪುವುದಿಲ್ಲ. ಜೈಮಿನಿಸೂತ್ರವು ಕರ್ಮಕಾಂಡಕ್ಕೆ ಸಂಬಂಧಿಸಿದ್ದೆಂದೂ ಜ್ಞಾನಕಾಂಡದಲ್ಲಿ ಜ್ಞಾನವೇ ಪ್ರಧಾನವೆಂದೂ ಹೇಳುತ್ತಾರೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ, ಇದಂ ಸರ್ವಂ ಯದಯಮಾತ್ಮಾ' ಮುಂತಾದವು

ಕೇವಲ ಬ್ರಹ್ಮಸ್ವರೂಪವನ್ನು ತಿಳಿಸುತ್ತವೆ. ಇವು ಯಾವ ಕ್ರಿಯೆಯನ್ನೂ ಬೋಧಿಸುವುದಿಲ್ಲ. ವೇದವಾಕ್ಯವು ಜ್ಞಾಪಕವೇ ಹೊರತು ಕಾರಕವಲ್ಲ. ಇಂತಹ ಬ್ರಹ್ಮವಿದ್ಯೆಯಿಂದಲೇ ಮಾನವನು ಕೃತಾರ್ಥನಾಗುತ್ತಾನೆ. ಕರ್ಮಜನ್ಯವಾದ ಸ್ವರ್ಗಾದಿಗಳಿಂದ ಕೃತಾರ್ಥತೆ ಇಲ್ಲ. ಸ್ವರ್ಗಪ್ರಾಪ್ತಿಯೂ ನಿತ್ಯವಲ್ಲ. **"ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ"** ಪುಣ್ಯವು ಕ್ಷಯಿಸಿದೊಡನೆ ಮತ್ತೆ ಈ ಭೂಲೋಕದಲ್ಲಿ ಹುಟ್ಟಬೇಕಾಗುತ್ತದೆ. ಸಂಸಾರವು ತಪ್ಪುವುದೇ ಇಲ್ಲ ಎಂದು ವೇದಾಂತಿಗಳ ಮತವಿದೆ.

ವೇದ ಶಬ್ದಕ್ಕೆ ಜ್ಞಾನವೆಂದೂ ಜ್ಞಾನಸಾಧಕವೆಂದೂ ಅರ್ಥವಿದೆ. ಆದ್ದರಿಂದ ಸಮಗ್ರವೇದದಲ್ಲಿ ಜ್ಞಾನದ ವಿಷಯವೂ ಇದೆ. ಕರ್ಮದ ವಿಷಯವೂ ಇದೆ.

ಕ್ರಿಯೋಪಯೋಗಿಯಾದ ಜ್ಞಾನವನ್ನು ಬೋಧಿಸುವ ಭಾಗವನ್ನು ಕರ್ಮಕಾಂಡವೆಂದೂ, ಜ್ಞಾನೋಪಯೋಗಿಯಾದ ಕ್ರಿಯೆಯನ್ನು ತಿಳಿಸುವ ಭಾಗವನ್ನು ಜ್ಞಾನಕಾಂಡವೆಂದೂ ಹೇಳಬಹುದು. ಕರ್ಮಕಾಂಡದಲ್ಲಿ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣಗಳೆಂಬ ಷಟ್‌ಕಾರಕಗಳ ಸ್ವರೂಪವನ್ನು ತಿಳಿಸುವ ವಾಕ್ಯಗಳಿವೆ. ಯಾಗಾದಿಕ್ರಿಯೆಯನ್ನು ಮಾಡುವಾಗ ಯಾರು, ಯಾವುದನ್ನು, ಯಾವುದರಿಂದ, ಯಾವ ಪ್ರಯೋಜನಕ್ಕಾಗಿ ಯಾವುದರ ದೆಸೆಯಿಂದ, ಎಲ್ಲಿ ಎಂಬುದನ್ನು ಸ್ಪಷ್ಟವಾಗಿ ತಿಳಿದಿರಬೇಕು. ಇದೇ ಕಾರಕಗಳ ಜ್ಞಾನ. ಈ ಜ್ಞಾನವು ಯಾಗಾದಿ ಕ್ರಿಯೆಗೆ ಉಪಯುಕ್ತವಾಗುತ್ತದೆ. ಆದ್ದರಿಂದ ವಿಧಿಯು ಜ್ಞಾಪಕ.

ಜ್ಞಾನಕಾಂಡದಲ್ಲಿ ಹೇಳಿರುವ ಆತ್ಮಜ್ಞಾನದ ಸಿದ್ಧಿಗಾಗಿ ಕರ್ಮಗಳೂ ಬೇಕಾಗುತ್ತವೆ. ಈ ಶಿಕ್ಷಾವಲ್ಲಿಯಲ್ಲಿ ಹಲವಾರು ಉಪಾಸನೆಗಳನ್ನು ಹೇಳಿರುವುದು ಆತ್ಮಜ್ಞಾನಕ್ಕಾಗಿಯೇ. ಉಪಾಸನೆಯೂ ಮಾನಸವಾದ ಕ್ರಿಯೆ. 'ದೇವ ಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್, ಮಾತೃದೇವೋ ಭವ, ಅತಿಥಿದೇವೋ ಭವ' ಇತ್ಯಾದಿವಾಕ್ಯಗಳು ಗೃಹಸ್ಥನು ಮಾಡಬೇಕಾದ ಕ್ರಿಯೆಗಳನ್ನು ಬೋಧಿಸುತ್ತವೆ. ಈ ಕ್ರಿಯೆಗಳು ದುರಿತಕ್ಷಯಚಿತ್ತಶುದ್ಧಿದ್ವಾರಾ ಆತ್ಮಜ್ಞಾನೋಪಯೋಗಿಗಳೆಂದು ತಿಳಿಸಿದ್ದಾಗಿದೆ. ಈ ಪ್ರಕಾರವಾಗಿ ಜ್ಞಾನಕಾಂಡ ಕರ್ಮಕಾಂಡಗಳಿಗೆ ಸಮನ್ವಯವಿದೆ. ವಿರೋಧವಿಲ್ಲ. ಪರಮಪುರುಷಾರ್ಥವಾದ ಮೋಕ್ಷವು ಮಾತ್ರ ಬ್ರಹ್ಮವಿದ್ಯೆಯಿಂದಲೇ ಹೊರತು ಕರ್ಮದಿಂದಲ್ಲ. ಕರ್ಮಜ್ಞಾನಗಳಲ್ಲಿ ಜ್ಞಾನವೇ ಪ್ರಧಾನವಾದದ್ದು. ಆದ್ದರಿಂದ ವೇದಾಂತವೇ ವೇದರಾಶಿಯಲ್ಲಿ ಪ್ರಧಾನವಾದದ್ದು. ಇದೇ ವೇದೋಪನಿಷತ್-ಎಂಬುದು ಸಿದ್ಧಾಂತ.

## ದ್ವಾದಶಾನುವಾಕ

**ಓಂ ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಮ್ । ಋತಮವಾದಿಷಮ್ । ಸತ್ಯಮವಾದಿಷಮ್ । ತನ್ಮಾಮಾವೀತ್ । ತದ್ವಕ್ತಾರಮಾವೀತ್ । ಆವೀನ್ಮಾಮ್ । ಆವೀದ್ವಕ್ತಾರಮ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ।**

**ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ॥**

**ಶಂ ನೋ ಮಿತ್ರಃ** – ಇತ್ಯಾದಿ ಶಾಂತಿಯನ್ನು ವಿದ್ಯಾಪ್ರಾಪ್ತಿಗಿರುವ ವಿಘ್ನದ ಪರಿಹಾರಕ್ಕಾಗಿ ಈ ಉಪನಿಷತ್ತಿನ ಆದಿಯಲ್ಲಿ ಪಠಿಸಲಾಗಿದೆ. ಈಗಲಾದರೋ ಮುಂದೆ ಹೇಳುವ ಬ್ರಹ್ಮವಿದ್ಯಾಪ್ರಾಪ್ತಿಗೆ ಇರಬಹುದಾದ ವಿಘ್ನದ ಶಾಂತಿಗಾಗಿ ಪಠಿತವಾಗಿದೆ. ಈ ಅನುವಾಕದಲ್ಲಿ ಆವೀತ್ = ರಕ್ಷಿಸಿತು. ಅವಾದಿಷಮ್ = ಹೇಳಿದೆನು ಎಂದು ಭೂತಕಾಲದ ಪ್ರಯೋಗವಾಗಿರುವುದರಿಂದ ಹಿಂದೆ ಪಠಿಸಿದ ಶಾಂತಿಪಾಠದ ಉಪಸಂಹಾರವೆಂದು ತೋರಿದರೂ ಆದಿಯಲ್ಲಿ 'ಶಂ ನೋ ಭವತ್ಯರ್ಯಮಾ' ಎಂಬ ಪ್ರಾರ್ಥನೆಯಿರುವುದರಿಂದ ಈ ಶಾಂತಿಪಾಠವನ್ನು ಮುಂದೆ ಹೇಳುವ ಬ್ರಹ್ಮವಲ್ಲಿಗೆ ಅನ್ವಯಿಸಿಕೊಳ್ಳುವುದು ಯುಕ್ತವಾದದ್ದು. ಹೇಗಿದ್ದರೂ ನಿರ್ವಿಘ್ನವಾಗಿ ಹಿಂದಿನದು ಮುಗಿದುಹೋಗಿದೆ.

ಸಹನಾವವತು = ನೌ – ಗುರುಶಿಷ್ಯರಾದ ನಮ್ಮಿಬ್ಬರನ್ನು, ಬ್ರಹ್ಮವು, ಅವತು = ರಕ್ಷಿಸಲಿ ಎಂದು ಪ್ರಾರ್ಥನೆ. ಸಹ ಶಬ್ದಕ್ಕೆ ಅವತು ಎಂಬಲ್ಲಿಗೆ ಅನ್ವಯವಾದ್ದರಿಂದ 'ಸಹಯುಕ್ತೇಽಪ್ರಧಾನೇ'(೨-೩-೧೯) ಎಂಬ ಸೂತ್ರದಿಂದ ವಿಹಿತವಾದ ತೃತೀಯಾವಿಭಕ್ತಿಗೆ ಅವಕಾಶವಿಲ್ಲ. ಸಹಯೋಗವಿರುವ ಇನ್ನೊಂದನ್ನು ಬೇರೆ ಶಬ್ದದಿಂದ ಹೇಳಿಯೂ ಇಲ್ಲ. 'ಮಾ ವಿದ್ವಿಷಾವಹೈ' ಪ್ರಮಾದದಿಂದ ಶಿಷ್ಯನಲ್ಲಿಯೋ ಅಥವಾ ಆಚಾರ್ಯನಲ್ಲಿಯೋ ದೋಷ ಉಂಟಾಗಬಹುದು. ಅಷ್ಟುಮಾತ್ರದಿಂದ ನಾವು ಅನ್ಯೋನ್ಯವಾಗಿ ಎಂದಿಗೂ ದ್ವೇಷಿಸಬಾರದು ಎಂದು ಹಾರೈಸಲಾಗಿದೆ. ಗುರುವಿನ ಅಂತಃಕರಣವು ಶಾಂತವಾಗಿರಬೇಕು. ಶಿಷ್ಯನಿಗೆ ಗುರುವಿನಲ್ಲಿ ಭಕ್ತಿ ಇರಬೇಕು. ಆಗಮಾತ್ರ ವಿದ್ಯೋಪದೇಶವು ಸಾರ್ಥಕವಾಗುತ್ತದೆ.

**ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ॥**

ಎಂದು ಅಭಿಯುಕ್ತವಚನವಿದೆ.

ಯಾಸ್ಕಮುನಿಗಳು ನಿರುಕ್ತದಲ್ಲಿ ಉದಾಹರಿಸಿರುವ ಎರಡು ಮಂತ್ರಗಳು ಇಲ್ಲಿ ಸ್ಮರಣೀಯವಾದವು–

**೧. ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ**
**ಗೋಪಾಯ ಮಾ ಶೇವಧಿಷ್ಟೇಽಹಮಸ್ಮಿ।**
**ನಾಸೂಯಕಾಯಾನೃಜವೇಽಯತಾಯ**
**ನ ಮಾ ಬ್ರೂಯಾ ವೀರ್ಯವತೀ ತಥಾ ಸ್ಯಾಮ್॥**

ವೇದವಿದ್ಯೆಯು ಬ್ರಾಹ್ಮಣನ ಬಳಿಗೆ ಬಂದು ಹೀಗೆ ಹೇಳಿತು. "ಅಯ್ಯಾ ನಾನು ನಿನ್ನಬಳಿ ಒಂದು ನಿಧಿಯಾಗಿರುತ್ತೇನೆ. ನನ್ನನ್ನು ರಕ್ಷಿಸಿಕೊಂಡಿರು. ಅಸೂಯೆಪಡತಕ್ಕವನಿಗೆ ಕುಟಿಲಬುದ್ಧಿಯವನಿಗೆ ನನ್ನನ್ನು ಹೇಳಬೇಡ. ಜಿತೇಂದ್ರಿಯನಲ್ಲದನಿಗೂ ತಿಳಿಸಬೇಡ. ಅಂತಹವರಿಗೆ ಹೇಳದಿರುವುದರಿಂದ ನಾನು ಇನ್ನೂ ಬಲಶಾಲಿಯಾಗುತ್ತೇನೆ."

**೨. ಯಮೇವ ವಿದ್ಯಾಃ ಶುಚಿಮಪ್ರಮತ್ತಂ**
**ಮೇಧಾವಿನಂ ಬ್ರಹ್ಮಚರ್ಯೋಪಪನ್ನಮ್।**
**ಯಸ್ತ್ವಾ ನ ದ್ರುಹ್ಯೇತ್ ಕತಿಚಿಚ್ಚನಾಹ**
**ತಸ್ಮೈ ಮಾ ಬ್ರೂಯಾ ನಿಧಿಪಾಯ ಬ್ರಹ್ಮನ್॥**

"ಯಾವಾತನು ಶುಚಿಯೂ ಪ್ರಮಾದವನ್ನೆಂದಿಗೂ ಮಾಡದವನೂ ಮೇಧಾವಿಯೂ ಬ್ರಹ್ಮಚರ್ಯದಿಂದ ವಿರಾಜಿಸತಕ್ಕವನೂ ಎಂದೆಂದಿಗೂ ನಿನಗೆ ದ್ರೋಹಮಾಡದವನೂ ಆಗಿದ್ದಾನೆಂದು ನೀನು ತಿಳಿದಿದ್ದೀಯೋ ಅಂತಹ ವಿದ್ಯಾನಿಧಿಯನ್ನು ರಕ್ಷಿಸತಕ್ಕವನಿಗೆ ಮಾತ್ರ, ಹೇ ಬ್ರಾಹ್ಮಣ! ನನ್ನನ್ನು ತಿಳಿಸಿಹೇಳು."

*****

# ೨.ಬ್ರಹ್ಮವಲ್ಲೀ

ಇದು ಶಿಕ್ಷೋಪನಿಷತ್ತಿನ ಮುಂದಿನದು. ಈ ಬ್ರಹ್ಮವಲ್ಲಿಗೆ ಆನಂದವಲ್ಲಿಯೆಂದೂ ಹೆಸರಿದೆ. ಇದುವರೆಗೆ ಕರ್ಮಗಳಿಗೆ ವಿರುದ್ಧವಲ್ಲದ ಕೆಲವು ಉಪಾಸನೆಗಳನ್ನು ಹೇಳಲಾಯಿತು. ವ್ಯಾಹೃತಿಗಳ ಉಪಾಸನೆಯಿಂದ ವ್ಯಕ್ತವಾಗತಕ್ಕದ್ದು ಸೋಪಾಧಿಕನಾದ ಆತ್ಮನ ದರ್ಶನ. ಇದರಿಂದ ಸಂಸಾರವು ನಿಃಶೇಷವಾಗಿ ನಿವೃತ್ತವಾಗುವುದಿಲ್ಲ. ಸರ್ವೋಪಾಧಿವರ್ಜಿತವಾದ ಶುದ್ಧಪರಬ್ರಹ್ಮದರ್ಶನವಾದಾಗ ಸಂಸಾರವು ನಿಃಶೇಷವಾಗಿ ತೊಡೆದು ಹೋಗುತ್ತದೆ. ಸಂಸಾರ ಕಾರಣವಾದ ಅವಿದ್ಯೆಯು ಸಂಪೂರ್ಣನಾಶವಾಗುವುದೇ ಇದಕ್ಕೆ ಕಾರಣ. ಅವಿದ್ಯೆಯಿಂದಲ್ಲವೆ ಸಂಸಾರದ ಪ್ರವೃತ್ತಿ? ಈ ಉಪನಿಷತ್ತಿನಲ್ಲಿ ಮುಂದೆ "ವಿದ್ವಾನ್ನಬಿಭೇತಿ ಕುತಶ್ಚನ" ಎಂದು ಹೇಳಿದೆ. ಬ್ರಹ್ಮವಿದನು ಮುಂದೆ ಎಂದಿಗೂ ಹೆದರಬೇಕಾದ್ದೇ ಇರುವುದಿಲ್ಲವೆಂದು ಅದರ ಅಭಿಪ್ರಾಯ. ಬ್ರಹ್ಮವಲ್ಲಿಯ ಆರಂಭದಲ್ಲಿಯೇ 'ಬ್ರಹ್ಮವಿದಾಪ್ನೋತಿ ಪರಮ್' ಎಂಬ ವಾಕ್ಯವಿದೆ. ಬ್ರಹ್ಮವಿದನು ನಿರತಿಶಯವಾದ ಬ್ರಹ್ಮವನ್ನು ಪಡೆಯುತ್ತಾನೆ ಎಂದರೆ ಬ್ರಹ್ಮವೇ ಆಗಿಬಿಡುತ್ತಾನೆ ಎಂದರ್ಥ. "ಸ ಯೋ ಹ ವೈ ತತ್ಪರಮಂ ಬ್ರಹ್ಮವೇದ ಬ್ರಹ್ಮೈವ ಭವತಿ" ಎಂದೂ ಶ್ರುತಿಯು ಹೇಳಿದೆ.

ಸರ್ವಗತವೂ ಅಪರಿಚ್ಛಿನ್ನವೂ ಆದ ಬ್ರಹ್ಮವನ್ನು ಹೊಸದಾಗಿ ಪಡೆಯಬೇಕಾಗಿಲ್ಲ. ಮನುಷ್ಯನಾದರೋ ತಾನೊಬ್ಬ ಅಲ್ಪನಾದ ಜೀವನೆಂದೂ ಅಥವಾ ಅನ್ನಮಯವಾದ ಶರೀರವೇ ನಾನೆಂದೂ ಭ್ರಮಿಸಿರುತ್ತಾನೆ. ಅವನ ದೃಷ್ಟಿಯಲ್ಲಿ ಬ್ರಹ್ಮದರ್ಶನವೆಂದರೆ ಬ್ರಹ್ಮವೆಂಬ ಒಂದು ನೂತನ ವಸ್ತುವಿನ ದರ್ಶನವೆಂದೂ ಅದನ್ನು ಪಡೆಯಬಹುದೆಂದೂ ಆಗಿರುತ್ತದೆ. ಅಂತಹವರನ್ನು ಲಕ್ಷ್ಯದಲ್ಲಿಟ್ಟುಕೊಂಡು ಶ್ರುತಿಯು 'ಬ್ರಹ್ಮವಿದಾಪ್ನೋತಿಪರಂ' ಎಂದು ಹೇಳಿದೆ. ತಾನು ಬ್ರಹ್ಮವೆಂದು ನಿಶ್ಚಯಿಸಿ ತಿಳಿದುಕೊಳ್ಳುವುದೇ ಬ್ರಹ್ಮದ ಪ್ರಾಪ್ತಿ. ಮನುಷ್ಯನು ಅನಾದಿಯಾದ ಅವಿದ್ಯೆಯಿಂದ ತನ್ನ ಸ್ವರೂಪವನ್ನೇ ಮರೆತುಬಿಟ್ಟಿದ್ದಾನೆ. ಆತನ ನಿಶ್ಚಿತ ಸ್ವರೂಪವನ್ನು ತಿಳಿಸುವ ವಿದ್ಯೆಯೇ ಬ್ರಹ್ಮವಿದ್ಯೆ.

**ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ॥**

**ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನಮನಂತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್‌ತ್ಸಹ । ಬ್ರಹ್ಮಣಾ ವಿಪಶ್ಚಿತೇತಿ ।**

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್ । ಅನ್ನಾತ್ ಪುರುಷಃ । ಸವಾ ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ । ಅಯಂ ದಕ್ಷಿಣಃ ಪಕ್ಷಃ । ಅಯಮುತ್ತರಃ ಪಕ್ಷಃ । ಅಯಮಾತ್ಮಾ । ಇದಂಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥೧॥**

ಬ್ರಹ್ಮಶಬ್ದವು ದೊಡ್ಡದಾಗುವುದು ಎಂಬ ಅರ್ಥವನ್ನು ಕೊಡುವ ಬೃಹಧಾತುವಿನಿಂದ ಬಂದಿದೆ. ಎಷ್ಟು ದೊಡ್ಡದು ಎಂಬ ಪರಿಮಿತಿ ಇಲ್ಲದ್ದು. ಬಹುದೊಡ್ಡದು. ಇಷ್ಟು ಹೇಳಿದರೆ ಅದೊಂದು ಮಹತ್ತರವಾದ ವಸ್ತುವೆಂದಾಗುತ್ತದಯೇ ಹೊರತು ಅದರ ವಿಶೇಷವೇನೆಂಬುದು ತಿಳಿಯುವುದಿಲ್ಲ. ಆದ್ದರಿಂದ ಬ್ರಹ್ಮದ ಸ್ವರೂಪವಿಶೇಷವನ್ನು ತಿಳಿಸುವುದಕ್ಕಾಗಿ ಈ ವಾಕ್ಯವು ಬಂದಿದೆ. "ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ" ಇದನ್ನು ಬ್ರಹ್ಮದ ಸ್ವರೂಪಲಕ್ಷಣವೆನ್ನುತ್ತಾರೆ. ಬ್ರಹ್ಮವು ಲಕ್ಷ್ಯ. ಉಳಿದ ಮೂರು ವಿಶೇಷಣಗಳು ಅದರ ಲಕ್ಷಣ. ಮೊದಲನೆಯದು ಸತ್ಯಂ. "ಯದ್ರೂಪೇಣ ಯನ್ನಿಶ್ಚಿತಂ ತತ್ ತದ್ರೂಪಂ ನ ವ್ಯಭಿಚರತಿ ತತ್ ಸತ್ಯಂ" ಎಂಬುದು ಸತ್ಯದ ಲಕ್ಷಣ. ಯಾವ ವಸ್ತು ಯಾವ ಸ್ವರೂಪವುಳ್ಳದ್ದೆಂದು ನಿಶ್ಚಿತವಾಗಿದೆಯೋ ಆ ಸ್ವರೂಪವನ್ನು ಅದು ಎಂದಿಗೂ ತ್ಯಜಿಸದಿದ್ದರೆ ಆಗ ಅದು ಸತ್ಯವೆನಿಸುತ್ತದೆ. "ಉದಾ – ಹಗ್ಗ. ಅದು ಯಾವಾಗಲೂ ಹಗ್ಗವಾಗಿಯೇ ಇರುತ್ತದೆ. ಅದು ಹಾವು ಎಂದು ಒಬ್ಬನು ಭ್ರಮಿಸಿದಾಗ ಹಾವು ಸತ್ಯವಲ್ಲ. ಹತ್ತಿರ ಹೋಗಿ ನೋಡಿದಾಗ ಹಾವು ತನ್ನ ಸ್ವರೂಪವನ್ನು ಕಳೆದುಕೊಂಡು ಹಗ್ಗವಾಗಿಬಿಟ್ಟಿರುತ್ತದೆ. ಆದ್ದರಿಂದ ಹಾವು ಸತ್ಯವಲ್ಲ, ಹಗ್ಗವು ಸತ್ಯ. ಹಾಗೆಯೇ ಮಣ್ಣಿನ ವಿಕಾರವಾದ ಗಡಿಗೆ ಸತ್ಯವಲ್ಲ, ಮಣ್ಣು ಸತ್ಯ. ಶ್ರುತಿಯು "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" ಎಂದು ಹೇಳಿದೆ (ಛಾಂ.೬–೪). 'ಗಡಿಗೆ, ಹರವಿ, ಹಣತೆ ಮೊದಲಾದ ವಿಕಾರವೆಲ್ಲವೂ ಬರಿಯ ಹೆಸರು ಮಾತ್ರ, ಮಣ್ಣು ಮಾತ್ರ ಸತ್ಯ' ಎಂದು ಅದರರ್ಥ. ಆದ್ದರಿಂದ ಬ್ರಹ್ಮ ಒಂದೇ ಸತ್ಯ, ಜಗತ್ತೆಂಬ ವಿಕಾರವು ಅನೃತ ಎಂದು ಅಭಿಪ್ರಾಯ. ಹಗ್ಗ, ಮಣ್ಣು ಮೊದಲಾದವು ಪಾರಮಾರ್ಥಿಕವಾಗಿ ಸತ್ಯವಲ್ಲ. ಹಿಂದೆ ಸತ್ಯವೆಂದು ಹೇಳಿರುವುದು ಲೌಕಿಕದೃಷ್ಟಾಂತಕ್ಕಾಗಿ. ಸತ್ಯವಾದ ಬ್ರಹ್ಮ ಒಂದೇ ಸತ್. ಉಳಿದದ್ದು ಅಸತ್.

ಗಡಿಗೆ ಮೊದಲಾದ ವಿಕಾರವು ಸತ್ಯವಲ್ಲ, ವಿಕಾರಕ್ಕೆ ಮೂಲವಾದ ಮೃತ್ತಿಕೆಯೇ ಸತ್ಯವೆಂದು ದೃಷ್ಟಾಂತದಿಂದ ಸಾಧಿಸಲಾಯಿತು. ಹಾಗೆಯೇ

ಜಗತ್ತೆಂಬ ವಿಕಾರಕ್ಕೆ ಮೂಲವಾದದ್ದು ಬ್ರಹ್ಮವಾದ್ದರಿಂದ, ಬ್ರಹ್ಮವು ಮೃತ್ತಿಕೆಯಂತೆಯೇ ಜಗತ್ತಿಗೆ ಕಾರಣವೆಂದೂ, ಜಡವಸ್ತುವೆಂದೂ ಆಗಿಬಿಡುತ್ತದೆ. ಆದ್ದರಿಂದ 'ಜ್ಞಾನಂ' ಎಂದು ಇನ್ನೊಂದು ವಿಶೇಷಣವನ್ನು ಬ್ರಹ್ಮಕ್ಕೆ ಕೊಡಲಾಗಿದೆ. ಜ್ಞಾನಶಬ್ದವು ಭಾವಾರ್ಥಕ. ಭಾವೇಲ್ಯುಟ್‌ಪ್ರತ್ಯಯ ಬಂದಿದೆ. ಜ್ಞಪ್ತಿ, ಬೋಧ ಎಂದರ್ಥ.

ಒಳ್ಳೆಯದು. ಇದರಿಂದ ಬ್ರಹ್ಮವು ಮಣ್ಣಿನಂತೆ ಜಡವಸ್ತುವಲ್ಲ–ವೆಂದಾದರೂ ಜಗತ್ಕಾರಣವೆಂದು ಹೇಗೆ ಸಿದ್ಧವಾಗುತ್ತದೆ? ಜ್ಞಾನವುಳ್ಳ ಒಬ್ಬ ಕರ್ತೃ ಬೇಕು. ಆದ್ದರಿಂದ ಜ್ಞಾನವೆಂದರೆ ಜ್ಞಾನಜನಕವೆಂದೂ ಜ್ಞಾನದ ಕರ್ತೃವೆಂದೂ ಹೇಳುವುದು ಯುಕ್ತವಲ್ಲವೆ? ಹಾಗಲ್ಲ; ಕರ್ತೃವೆಂದರೆ ಅದು ಒಂದು ಕಾರಕವೆನಿಸುತ್ತದೆ. ಕಾರಕದಲ್ಲಿ ಒಂದು ಕ್ರಿಯೆ ಇರಲೇಬೇಕು. ಬ್ರಹ್ಮದಲ್ಲಿ ಜ್ಞಾನ, ಕ್ರಿಯೆ ಎಂಬ ಎರಡು ಧರ್ಮಗಳಿವೆಯೆಂದು ಹೇಳಬೇಕಾಗುತ್ತದೆ. ಜ್ಞಾನಕ್ರಿಯೆಗಳೆರಡೂ ಬರುತ್ತವೆ–ಹೋಗುತ್ತವೆ. ಆಗ ಬ್ರಹ್ಮವು ವಿಕಾರ ಹೊಂದುತ್ತದೆ ಎಂದಾಗಿಬಿಡುವುದರಿಂದ ಅದು ನಿತ್ಯವೆನ್ನುವುದು ಹೇಗೆ? ವಿಕಾರಿಯಾದದ್ದು ನಿತ್ಯವಲ್ಲವಷ್ಟೆ?

ಇನ್ನೂ ಒಂದು ದೋಷ ಬರುತ್ತದೆ. ಬ್ರಹ್ಮದಲ್ಲಿ ಜ್ಞಾನವು ಹುಟ್ಟುತ್ತದೆ ಎಂದಾದರೆ ಜ್ಞೇಯವಸ್ತು ಇನ್ನೊಂದಿರಬೇಕಾಗುತ್ತದೆ. ಬ್ರಹ್ಮಕ್ಕಿಂತ ಬೇರೆಯಾಗಿ ಜ್ಞಾನ, ಜ್ಞೇಯಗಳೆರಡು ಇರುವುದಾದರೆ ಬ್ರಹ್ಮವು ಅನಂತವಾಗುವುದು ಹೇಗೆ? ಯಾವುದರಿಂದಲೂ ಪರಿಚ್ಛಿನ್ನವಾಗದಿರುವುದು ಅನಂತ. ಜ್ಞಾನಜ್ಞೇಯಗಳು ಪ್ರತ್ಯೇಕವಾಗಿ ಇದ್ದರೆ ಬ್ರಹ್ಮವು ಆ ವಸ್ತುಗಳಿಂದ ಪರಿಚ್ಛಿನ್ನವಾಗುತ್ತದೆ. ಆಗ ಅನಂತವೆಂಬುದು ಸಿದ್ಧವಾಗುವುದಿಲ್ಲ. ಆದ್ದರಿಂದ ಬ್ರಹ್ಮವು ಜ್ಞಾನಾಶ್ರಯವೆಂದೂ ಜ್ಞಾತೃವೆಂದೂ ಹೇಳುವುದು ಯುಕ್ತವಲ್ಲ. ಜ್ಞೇಯವಾದ ಇನ್ನೊಂದು ವಸ್ತುವಿಲ್ಲದಿದ್ದರೂ ಬ್ರಹ್ಮವು ತನ್ನನ್ನು ತಾನೇ ತಿಳಿದುಕೊಳ್ಳುತ್ತದೆಯಾದ್ದರಿಂದ ಜ್ಞಾತೃವೆನ್ನಬಹುದಲ್ಲವೆ? ಇಲ್ಲ; ಅವಯವರಹಿತವೂ ಭೂಮವೂ ಆದ ಬ್ರಹ್ಮವು ಏಕಕಾಲದಲ್ಲಿ ಕರ್ತೃವೂ ಕರ್ಮವೂ ಆಗುವುದಿಲ್ಲ. ಯಾವ ಕ್ರಿಯೆಯಿಂದ ತಾನು ಕರ್ತೃವೋ ಅದೇ ಕ್ರಿಯೆಯಿಂದ ಏಕಕಾಲದಲ್ಲಿ ತಾನು ಕರ್ಮವೂ ಆಗುತ್ತದೆಯೆನ್ನುವುದು ಸರ್ವಶಾಸ್ತ್ರ ವಿರುದ್ಧ. ಬ್ರಹ್ಮವು ಕರ್ತೃ ಮುಂತಾದ ಯಾವ ಕಾರಕವೂ ಆಗುವುದಿಲ್ಲವೆಂದೂ ಅದು ಜಡ ವಸ್ತುವಲ್ಲವೆಂದೂ ಬೋಧಿಸುವುದಕ್ಕಾಗಿ ಬ್ರಹ್ಮಕ್ಕೆ 'ಜ್ಞಾನ' ಎಂಬ ವಿಶೇಷಣವನ್ನು ಕೊಡಲಾಗಿದೆ. ಲೌಕಿಕವಾದ ಘಟಜ್ಞಾನ ಮುಂತಾದ ಜ್ಞಾನಕ್ಕೆ ಅಂತ ಉಂಟು. ಆದರೆ ಈ 'ಜ್ಞಾನ'ಕ್ಕೆ ಅಂತವಿಲ್ಲವೆಂದು ತಿಳಿಸುವುದಕ್ಕಾಗಿ 'ಅನಂತ' ಎಂಬ ವಿಶೇಷಣವನ್ನು

ಕೊಡಲಾಗಿದೆ. ಅನಂತವೆಂದರೆ ಅಪರಿಚ್ಛಿನ್ನವೆಂದರ್ಥ. ಒಂದು ವಸ್ತುವಿಗೆ ದೇಶ, ಕಾಲ, ವಸ್ತುಗಳಿಂದ ಮೂರು ಬಗೆಯ ಅಂತವು – ಪರಿಚ್ಛೇದವು ಬರಬಹುದು. ದೇಶವೆಂದರೆ ಸ್ಥಳ. ಒಂದು ಮನೆಯನ್ನೇ ಉದಾಹರಿಸಬಹುದು. ಎದುರಿಗೆ ರಸ್ತೆ ಇರುವ ಪರ್ಯಂತ ಮನೆ ಇದೆ. ರಸ್ತೆಯ ದೇಶದಲ್ಲಿ ಮನೆ ಇಲ್ಲ. ಆದ್ದರಿಂದ ಮನೆಯು ರಸ್ತೆಯೆಂಬ ದೇಶದಿಂದ ಪರಿಚ್ಛಿನ್ನವಾಯಿತು. ಕಟ್ಟುವುದಕ್ಕೆ ಮೊದಲು ಮನೆ ಇರಲಿಲ್ಲ. ಇನ್ನು ನೂರಾರುವರ್ಷಗಳ ಮೇಲೆ ಅದು ಇರುವುದೂ ಇಲ್ಲ. ಮನೆಯು ಕಾಲದಿಂದಲೂ ಪರಿಚ್ಛಿನ್ನವಾಯಿತು. ಮನೆಯ ಪಕ್ಕದಲ್ಲಿ ಇನ್ನೊಂದು ಮನೆಯಿದೆ. ಮನೆಯೆಂಬ ಆ ವಸ್ತುವಿಗಿಂತ ಈ ಮನೆ ಭಿನ್ನವಾಗಿದೆ. ಆ ಮನೆಯಿಂದ ಈ ಮನೆ ಪರಿಚ್ಛಿನ್ನವಾಗುತ್ತದೆ.

ಬ್ರಹ್ಮವೊಂದು ಮಾತ್ರ ಯಾವುದರಿಂದಲೂ ಪರಿಚ್ಛಿನ್ನವಲ್ಲ. ಅದಿಲ್ಲದ ಇನ್ನೊಂದು ದೇಶ(ಸ್ಥಳ) ಇಲ್ಲ. ಆದ್ದರಿಂದ ದೇಶಪರಿಚ್ಛಿನ್ನವಲ್ಲ. ಅದಕ್ಕೆ ಆದ್ಯಂತಗಳಿಲ್ಲ. ಆದ್ದರಿಂದ ಕಾಲಪರಿಚ್ಛಿನ್ನವಲ್ಲ. ಬ್ರಹ್ಮವಲ್ಲದ ಇನ್ನೊಂದು ವಸ್ತುವೂ ಇಲ್ಲ. ಆದ್ದರಿಂದ ವಸ್ತು ಪರಿಚ್ಛಿನ್ನವಲ್ಲ. ಹೀಗೆ ಮೂರು ಬಗೆಯ ಅಂತವೂ ಇಲ್ಲವಾದ್ದರಿಂದ ಬ್ರಹ್ಮವು ಅನಂತ-ಅಪರಿಚ್ಛಿನ್ನ.

ಇಲ್ಲೊಂದು ಶಂಕೆಯುಂಟು. 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬ ಲಕ್ಷಣವಾಕ್ಯದಲ್ಲಿ ಜ್ಞಾನ ಶಬ್ದವು ಭಾವವಚನವೆಂದೂ ಜ್ಞಪ್ತಿ, ಬೋಧ-ಎಂದು ಅರ್ಥವೆಂದೂ ಹೇಳಿದ್ದೀರಿ. ಈ ಜ್ಞಾನವು ನಿತ್ಯವೆನ್ನುವುದು ಲೋಕಾನುಭವದಲ್ಲಿಲ್ಲ. ಘಟಜ್ಞಾನ, ಪಟಜ್ಞಾನ-ಮೊದಲಾದ ಜ್ಞಾನವು ಎಂದಿಗೂ ನಿತ್ಯವಲ್ಲ. ಆದ್ದರಿಂದ ಆತ್ಮನು (ಬ್ರಹ್ಮವು) ಜ್ಞಾನಸ್ವರೂಪನೆಂಬ ವೇದಾಂತಿಗಳ ಘೋಷಣೆ ಹೇಗೆ ಸರಿಯಾದೀತು? ಮತ್ತು ಜ್ಞಾನಕ್ಕೆ ಇನ್ನೊಂದು ವಿಷಯವಿರಬೇಕಾಗುತ್ತದೆಯಲ್ಲವೆ?

ಶಂಕೆ ಸರಿಯಾಗಿದೆ. ಅಲ್ಲಿ ಜ್ಞಾನವೆಂದರೆ ಚೈತನ್ಯವೆಂದರ್ಥ. ಚೈತನ್ಯವೆಂದರೆ ಒಂದಾನೊಂದು ಶಕ್ತಿವಿಶೇಷವೆನ್ನಬಹುದು. ಆತ್ಮನು ನಿತ್ಯಚೈತನ್ಯಸ್ವರೂಪನೆಂದರ್ಥ. ಈ ಚೈತನ್ಯವೇ ಪ್ರಕೃತದಲ್ಲಿ ಜ್ಞಾನವೆಂದೂ ಜ್ಞಪ್ತಿಯೆಂದೂ ಉಕ್ತವಾಗಿದೆ. "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಎಂದು ಶ್ರುತಿಯು ಹೇಳಿರುವುದರಿಂದ ಬ್ರಹ್ಮವು ಜ್ಞಾನದ ಕರ್ತೃವಲ್ಲ. "ನಾನು ತಿಳಿಯುತ್ತೇನೆ" ಎಂದು ಹೇಳುವುದು ಆತ್ಮನಿಗೂ ಅಂತಃಕರಣಕ್ಕೂ ಆಗಿರುವ ತಾದಾತ್ಮ್ಯ ಭ್ರಮೆಯಿಂದ. ಈ ಅಂತಃಕರಣವು ಪ್ರತ್ಯಗಾತ್ಮನ ಉಪಾಧಿಯಾಗಿದೆ. ಅಂತಃಕರಣಾವಚ್ಛಿನ್ನ ಚೈತನ್ಯವೇ ಜೀವಾತ್ಮ. ಅಂತಃಕರಣವು ಇಂದ್ರಿಯಗಳ ಮೂಲಕ ಶಬ್ದಾದಿವಿಷಯಗಳನ್ನು ಗ್ರಹಿಸುತ್ತದೆ. ಹೀಗೆ ಗ್ರಹಿಸುವುದೇ ಅಂತಃಕರಣದ ವೃತ್ತಿಜ್ಞಾನವೆನಿಸುತ್ತದೆ. ಈ ವೃತ್ತಿಜ್ಞಾನಗಳೆಲ್ಲವೂ

ಜ್ಞಾನಸ್ವರೂಪನಾದ ಆತ್ಮನಿಂದ ವ್ಯಾಪ್ತವಾಗಿರುತ್ತದೆ. ಈ ಅಂತಃಕರಣದ ವೃತ್ತಿಜ್ಞಾನಗಳು ಆತ್ಮಚೈತನ್ಯವ್ಯಾಪ್ತಗಳಾದ್ದರಿಂದ ಅವಿವೇಕಿಗಳಾದ ಜನರು ಆತ್ಮನೇ ಜ್ಞಾನಾಶ್ರಯ ಎಂದು ಭ್ರಾಂತರಾಗಿದ್ದಾರೆ.

ಬ್ರಹ್ಮವು ಜ್ಞಾನಸ್ವರೂಪವಾದರೆ ಬ್ರಹ್ಮಜ್ಞಾನ ಎಂಬ ಪ್ರಯೋಗವು ಹೇಗೆ ಸರಿಯಾಗುತ್ತದೆ? ಸೂರ್ಯನ ಪ್ರಕಾಶ, ಅಗ್ನಿಯ ಉಷ್ಣತೆ ಎಂಬ ಪ್ರಯೋಗಗಳಂತೆ ಕಾಲ್ಪನಿಕವಾದ ಅಂಶವನ್ನಿಟ್ಟುಕೊಂಡು ಇಂತಹ ಪ್ರಯೋಗಗಳು ಬರಬಹುದು. ಸೂರ್ಯನೇ ಪ್ರಕಾಶಸ್ವರೂಪ. ಅಗ್ನಿಯೇ ಉಷ್ಣತಾಸ್ವರೂಪ. ಕಲ್ಲಿನ ಪ್ರತಿಮೆ, ಮಣ್ಣಿನ ಗಡಿಗೆ–ಇತ್ಯಾದಿ ಪ್ರಯೋಗಗಳೂ ಈ ಬಗೆಯವು.

ಜೀವನು ಬ್ರಹ್ಮವೇ ಆದರೂ ಅಂತಃಕರಣವೆಂಬ ಉಪಾಧಿಯ ವಶದಿಂದ ನಾನು ತಿಳಿದಿದ್ದೇನೆ, ನಾನು ಹೋಗುತ್ತೇನೆ–ಇತ್ಯಾದಿ ಪ್ರಯೋಗಗಳು ಬರುವಂತೆ, ಬ್ರಹ್ಮವಸ್ತುವಿಗೆ ಮಾಯೋಪಾಧಿವಶದಿಂದ, ಈಶ್ವರನು ಸರ್ವಜ್ಞ, ಸರ್ವಶಕ್ತ, ದಯಾನಿಧಿ–ಇತ್ಯಾದಿ ಪ್ರಯೋಗಗಳು ಬಂದಿವೆ. ಶ್ರೀಶಂಕರಾಚಾರ್ಯರು ವಾಕ್ಯವೃತ್ತಿಯೆಂಬ ಗ್ರಂಥದಲ್ಲಿ **ಮಾಯೋಪಾಧಿರ್ಜಗದ್ಯೋನಿಃ ಸರ್ವಜ್ಞತ್ವಾದಿ ಲಕ್ಷಣಃ** ಎಂದು ಹೇಳಿದ್ದಾರೆ. ಶ್ರೀಕೃಷ್ಣನು ಹೇಳಿದ ಈ ಶ್ಲೋಕವು ಇಲ್ಲಿ ಗಮನಾರ್ಹವಾದುದ್ದು –

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥**–(ಗೀತಾ ೪–೬)

"ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ" ಎಂಬ ವಾಕ್ಯದಲ್ಲಿ ಪರಮಾರ್ಥವಾದ ಬ್ರಹ್ಮವಸ್ತುವಿಗೆ ಮೂರು ವಿಶೇಷಣಗಳನ್ನು ಕೊಟ್ಟು ಬ್ರಹ್ಮವೆಂದರೇನೆಂಬುದನ್ನು ತಿಳಿಸಲಾಗಿದೆ. ಅವುಗಳಲ್ಲಿ ಯಾವ ವಿಶೇಷಣವನ್ನು ಬಿಟ್ಟರೂ ದೋಷ ಬರುತ್ತದೆ ಎಂಬುದನ್ನು ಹಿಂದೆ ತೋರಿಸಿದ್ದೇವೆ. ಸತ್ಯ, ಜ್ಞಾನ, ಅನಂತ–ಎಂಬ ಮೂರು ಶಬ್ದಗಳೂ ಅನ್ಯೋನ್ಯನಿಯಮ್ಯನಿಯಾಮಕಭಾವದಿಂದ ಪ್ರವೃತ್ತವಾಗಿವೆ. ಇವು ಮೂರೂ ಪರಬ್ರಹ್ಮವನ್ನು ನೇರವಾಗಿ ಬೋಧಿಸುವ ವಾಚಕಶಬ್ದಗಳಲ್ಲ. ವಾಚಕಗಳಾದರೆ ಶಬ್ದಪ್ರವೃತ್ತಿನಿಮಿತ್ತಗಳಾದ ಜಾತಿಗುಣಕ್ರಿಯೆ–ಗಳಲ್ಲೊಂದಾದರೂ ಬ್ರಹ್ಮದಲ್ಲಿದೆಯೆಂದು ಹೇಳಬೇಕಾದೀತು. ಬ್ರಹ್ಮವಾದರೋ "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಇತ್ಯಾದಿ ಶ್ರುತಿಗಳಿಂದ ಬ್ರಹ್ಮವು ನಿರ್ವಿಶೇಷವಾದದ್ದೆಂದು ಸಿದ್ಧವಾಗಿದೆ. ಆದ್ದರಿಂದ ಈ ಮೂರು ಶಬ್ದಗಳೂ ಸೇರಿ ಸರ್ವಲೋಕವಿಲಕ್ಷಣವೂ ಸರ್ವವಿಶೇಷರಹಿತವೂ ಸರ್ವನೂ ಆದ ಒಂದಾನೊಂದು ನಿತ್ಯಚೈತನ್ಯವನ್ನು ಲಕ್ಷಣಾವೃತ್ತಿಯಿಂದ ಬೋಧಿಸುತ್ತವೆಯೆಂದು

ತಿಳಿಯಬೇಕು. ಆದ್ದರಿಂದಲೇ "ಯತೋವಾಚೋ ನಿವರ್ತಂತೇ, ಅಪ್ರಾಪ್ಯ ಮನಸಾ ಸಹ" ಎಂದು ಶ್ರುತಿಯೇ ಹೇಳಿದೆ.

**ಯೋ ವೇದ ನಿಹಿತಂ ಗುಹಾಯಾಮ್.**

ಅಡಗಿಸುವುದು, ಮುಚ್ಚುವುದು ಎಂದು ಅರ್ಥವಿರುವ ಗುಹೂಸಂವರಣೇ ಎಂಬ ಧಾತುವಿನಿಂದ ಗುಹಾಶಬ್ದವು ನಿಷ್ಪನ್ನವಾಗಿದೆ. ಜ್ಞಾನ, ಜ್ಞೇಯ, ಜ್ಞಾತೃಗಳು ಗೂಢವಾಗಿರುವ ಬುದ್ಧಿಯೇ ಗುಹೆ. ಅಥವಾ ಸುಖದುಃಖಾದಿಭೋಗ ಮತ್ತು ಜ್ಞಾನ-ಇವೆರಡು ಬುದ್ಧಿಯ (ಅಂತಃಕರಣದ) ಪರಿಣಾಮಗಳಾದ್ದರಿಂದ ಇವೆರಡು ಅಡಗಿರುವ ಬುದ್ಧಿಯೇ ಗುಹೆ. ಪರಮವ್ಯೋಮವೆಂದರೆ ಹೃದಯಾಕಾಶ. ವ್ಯೋಮನ್ ಎಂಬಲ್ಲಿ ಸಪ್ತಮೀವಿಭಕ್ತಿಗೆ ಛಾಂದಸವಾದ ಲುಕ್ ಬಂದಿದೆ. ಹೃದಯಾಕಾಶದಲ್ಲಿರುವ ಬುದ್ಧಿಗುಹೆಯಲ್ಲಿ ನಿಹಿತವಾದ ಬ್ರಹ್ಮವನ್ನು ತಿಳಿದವನು ಎಂದು ಸಮುದಿತಾರ್ಥ. ಗಾಯತ್ರೀವಿದ್ಯಾಪ್ರಕರಣದಲ್ಲಿ ಗಾಯತ್ರೀಪದದಿಂದ ಉಪಲಕ್ಷಿತವಾದ ಬ್ರಹ್ಮವನ್ನು ಹೃದಯಾಕಾಶದಲ್ಲಿ ಉಪಾಸನೆಮಾಡಬೇಕೆಂದು ಹೇಳಿದೆ. ಹೀಗೆ ಅನೇಕ ದೇವತೋಪಾಸನೆಗಳಿಗೆ ಹೃದಯಾಕಾಶವೇ ಉಪಾಸ್ಯ ದೇವತಾಸ್ಥಾನವಾಗಿದೆ. ಆದ್ದರಿಂದ ಅದನ್ನು 'ಪರಮೇ' ಎಂದು ವಿಶೇಷಿಸಿರುವುದು ಯುಕ್ತವೇ ಸರಿ. ಪರಮವೆಂದರೆ ಉತ್ಕೃಷ್ಟವೆಂದರ್ಥ.

ಈ ಬ್ರಹ್ಮವಿದನು ಸಕಲ ಕಾಮ್ಯಾರ್ಥಗಳನ್ನೂ ಪಡೆದು ಆನಂದಿಸಿ ಕೃತಾರ್ಥನಾಗುತ್ತಾನೆ ಎಂದು ಮುಂದಿನವಾಕ್ಯದ ತಾತ್ಪರ್ಯ. ಇಲ್ಲೊಂದು ವಿಶೇಷವುಂಟು "ಸಃ ವಿಪಶ್ಚಿತಾ ಬ್ರಹ್ಮಣಾ ಸರ್ವಾನ್ ಕಾಮಾನ್ ಸಹ ಅಶ್ನುತೆ" ಎಂದು ವಾಕ್ಯಾನ್ವಯ. ವಿಪಶ್ಚಿತ್ = ಸರ್ವಜ್ಞ. 'ಬ್ರಹ್ಮಣಾ' ಎಂಬಲ್ಲಿ 'ಪ್ರಕೃತ್ಯಾದಿಭ್ಯ ಉಪಸಂಖ್ಯಾನಮ್'-ಎಂಬ ವಾರ್ತಿಕದಿಂದ ತೃತೀಯಾ ವಿಭಕ್ತಿ ಬಂದಿದೆ. ಈ ವಿಭಕ್ತಿಯ ಅರ್ಥ ಅಭೇದ.

ಅವ್ಯಯಗಳಿಗೆ ಅನೇಕಾರ್ಥಗಳಿರುವುದರಿಂದ 'ಸಹ' ಶಬ್ದಕ್ಕೆ ಇಲ್ಲಿ ಯುಗಪತ್ (ಏಕಕಾಲದಲ್ಲಿ) ಎಂದರ್ಥ. ಆದ್ದರಿಂದಲೇ ಬ್ರಹ್ಮಣಾ ಎಂಬಲ್ಲಿ 'ಸಹಯುಕ್ತೇಽ ಪ್ರಧಾನೇ' ಎಂಬ ಸೂತ್ರದಿಂದ ತೃತೀಯಾ ವಿಭಕ್ತಿ ಬಂದಿಲ್ಲ. ಬ್ರಹ್ಮವಿದನೇ ಬ್ರಹ್ಮವಾಗಿರುವುದರಿಂದ ಸಹಯುಕ್ತನಾದ ಇನ್ನೊಬ್ಬನು ಇಲ್ಲವೂ ಇಲ್ಲ. ಆದ್ದರಿಂದ 'ಪ್ರಕೃತ್ಯಾದಿತ್ವಾತ್ ತೃತೀಯಾ' ಎಂಬುದೇ ಯುಕ್ತವಾದದ್ದು.[೧]

---

ಟಿಪ್ಪಣಿ ೧: ಇತ್ಥಂಭೂತಲಕ್ಷಣೇ ತೃತೀಯಾ - ಎಂದು ವನಮಾಲಾ ವ್ಯಾಖ್ಯಾನದಲ್ಲಿ ಬರೆದಿದೆ. ಶ್ರೀ ಸುರೇಶ್ವರ ವಾರ್ತಿಕದಲ್ಲಿ 'ಇತ್ಥಂಭೂತಲಕ್ಷಣೇ ತೃತೀಯಾ, ಹೇತು ತೃತೀಯಾ - ಎಂದು ಎರಡು ಪ್ರಕಾರಗಳನ್ನು ಹೇಳಿದ್ದಾರೆ.

ಭಾಷಾಮರ್ಯಾದೆಯನ್ನನುಸರಿಸಿ 'ಬ್ರಹ್ಮಣಾ' ಎಂಬುದಕ್ಕೆ ಬ್ರಹ್ಮಸ್ವರೂಪದಿಂದ ಎಂದು ಅರ್ಥವನ್ನು ಮುಂದೆ ಬರೆಯಲಾಗಿದೆ. ವಸ್ತುತಃ ಆ ಶಬ್ದಕ್ಕೆ 'ಸಃ' ಎಂಬುದರೊಡನೆ ಅನ್ವಯ. ಬ್ರಹ್ಮಾಭಿನ್ನನಾದ ಬ್ರಹ್ಮವಿದನು ಎಂದರ್ಥ. ಅಥವಾ ಬ್ರಹ್ಮವಿದನು ಬ್ರಹ್ಮಾಭಿನ್ನನಾಗಿ ಎಂದೂ ಹೇಳಬಹುದು.

ಅಹಂಬ್ರಹ್ಮಾಸ್ಮಿ ಎಂದು ನಿಶ್ಚಯಜ್ಞಾನವನ್ನು ಪಡೆದ ಆ ಬ್ರಹ್ಮವಿದನು ಸರ್ವಜ್ಞವಾದ ಬ್ರಹ್ಮಸ್ವರೂಪದಿಂದ ಸರ್ವಭೋಗಗಳನ್ನು ಏಕಕಾಲದಲ್ಲಿ ಪಡೆದು ಅನುಭವಿಸುತ್ತಾನೆ ಎಂದರ್ಥ. ಮನುಷ್ಯನು ಅನೇಕ ಭೋಗಗಳನ್ನು ಕ್ರಮವಾಗಿ ಒಂದಾದಮೇಲೆ ಒಂದರಂತೆ ಅನುಭವಿಸುತ್ತಾನೆ. ಸರ್ವಜ್ಞವಾದ ಬ್ರಹ್ಮವು ಸರ್ವವನ್ನು ಏಕಕಾಲದಲ್ಲಿ ಅನುಭವಿಸುತ್ತದೆ. 'ಸ ಏಕೋ ಬ್ರಹ್ಮಣ ಆನಂದಃ' ಎಂದು ಮುಂದೆ ಹೇಳುವ ಶ್ರುತಿವಾಕ್ಯದ ಪ್ರತಿಧ್ವನಿ ಇದು.

'ಬ್ರಹ್ಮವಿದಾಪ್ನೋತಿ ಪರಂ' ಎಂದು ಆದಿಯಲ್ಲಿ ಹೇಳಿದ ಸೂತ್ರದ ಅರ್ಥವನ್ನು ವ್ಯಾಖ್ಯಾನಿಸಿದಂತಾಯಿತು. ಈ ವಿಚಾರವನ್ನೇ ಮುಂದೆ ವಿಸ್ತರಿಸಿ ಹೇಳಲಾಗುತ್ತದೆ.

'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬಲ್ಲಿ ಬ್ರಹ್ಮವು ದೇಶ–ಕಾಲ–ವಸ್ತು ಈ ಮೂರರಿಂದಲೂ ಅಂತವಿಲ್ಲದ್ದರಿಂದ ಅನಂತ–ಅಪರಿಚ್ಛಿನ್ನವೆಂಬುದನ್ನು ಹೇಳಲಾಗಿದೆ. ಬ್ರಹ್ಮವೇ ಆತ್ಮ. ಆತ್ಮನಿಂದ ಆಕಾಶ ಹುಟ್ಟಿತು. ಆತ್ಮನು ಕಾರಣ, ಆಕಾಶವು ಕಾರ್ಯ. ಕಾರ್ಯವಾದ ಆಕಾಶವು ದೇಶತಃ ಅನಂತವಾಗಿದೆಯೆನ್ನಬಹುದು. ಆದರೆ ಕಾಲತಃ ಅನಂತವಲ್ಲ. ಕಾರ್ಯವಸ್ತುವಾದ್ದರಿಂದಲೇ ಅದಕ್ಕೆ ಅಂತವಿದೆ. ವಾಯು ಮುಂತಾದ ವಸ್ತ್ವಂತರಗಳಿರುವಾಗ ಬ್ರಹ್ಮವು 'ವಸ್ತುತಃ' ಅನಂತವಾಗುವುದು ಹೇಗೆ? ಹೇಗೆಂದರೆ, ಕಾಲಾಕಾಶಾದಿಸಮಸ್ತವಸ್ತುಗಳಿಗೂ ಬ್ರಹ್ಮವು ಕಾರಣವಾಗಿದೆ. ಕಾಲಾಕಾಶಾದಿಗಳೆಲ್ಲವೂ ಕಲ್ಪಿತವಾದ್ದರಿಂದ ಅನೃತಗಳು. ಮೃತ್ತಿಕೇತ್ಯೇವ ಸತ್ಯಂ–ಎಂಬ ಶ್ರುತ್ಯನುಸಾರವಾಗಿ ಬ್ರಹ್ಮ ಒಂದೇ ಸತ್ಯ. ತ್ರಿವಿಧ ಆನಂತ್ಯವಿರುವುದರಿಂದ ಬ್ರಹ್ಮವು ನಿರತಿಶಯವಾದ ಸತ್ಯವೆಂದು ತಿಳಿಯಬೇಕು.

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ**

ತಸ್ಮಾತ್ = 'ಬ್ರಹ್ಮವಿದಾಪ್ನೋಪತಿ ಪರಂ' ಎಂಬಲ್ಲಿ ಹೇಳಿದ ಬ್ರಹ್ಮವೆಂಬ, ಏತಸ್ಮಾತ್ = ಈ ಸತ್ಯಜ್ಞಾನಾನಂತಸ್ವರೂಪನಾದ, ಆತ್ಮನಃ = ಆತ್ಮನಿಂದ, ಆಕಾಶಃ ಸಂಭೂತಃ = ಆಕಾಶವು ಹುಟ್ಟಿತು. ಇಲ್ಲಿ ಬ್ರಹ್ಮವನ್ನೇ ಆತ್ಮನೆಂದು ಶ್ರುತಿಯು ಹೇಳಿದೆ. ಭೋಕ್ತೃಗಳಾದ ಸಕಲಪ್ರಾಣಿಗಳ ನಿಜಸ್ವರೂಪಕ್ಕೆ ಆತ್ಮವೆಂದು ಹೆಸರು.

ಆತ್ಮನೆಂದರೆ ಗುಹಾನಿಹಿತನಾದ ಪ್ರತ್ಯಗಾತ್ಮ. 'ಬ್ರಹ್ಮಣಾ ವಿಪಶ್ಚಿತಾ' ಎಂಬಲ್ಲಿ ವಿಪಶ್ಚಿತ್ ಎಂದರೆ ಬ್ರಹ್ಮವಿತ್. ಬ್ರಹ್ಮವಿತ್ ಆದ ಬ್ರಹ್ಮ ಎಂದು ಶ್ರುತಿಯೇ ಪ್ರಯೋಗಿಸಿರುವುದರಿಂದಲೂ ಬ್ರಹ್ಮ-ಬ್ರಹ್ಮವಿದರಲ್ಲಿ ಭೇದವಿಲ್ಲವೆಂದು ಗೊತ್ತಾಗುತ್ತದೆ. ಈ ರೀತಿಯಲ್ಲಿ ಬ್ರಹ್ಮ, ಆತ್ಮ, ಪ್ರತ್ಯಗಾತ್ಮ, ಬ್ರಹ್ಮವಿತ್ - ಎಂಬ ಶಬ್ದಗಳು ಒಂದೇ ಪರಮಾರ್ಥವಸ್ತುವನ್ನು ಬೋಧಿಸುತ್ತವೆಯೆಂದು ತಿಳಿಯಬೇಕು.

ಬ್ರಹ್ಮವೆಂಬ ಈ ಆತ್ಮನಿಂದ ಆಕಾಶವು ಹುಟ್ಟಿತು. ಕಾರಣವು ನಿರ್ಗುಣವಾದ ಬ್ರಹ್ಮವಾದರೂ ಕಾರ್ಯದಲ್ಲಿ ಶಬ್ದವೆಂಬ ಗುಣವು ಕಾಣಿಸಿಕೊಂಡಿದೆ. ಆಕಾಶವು ಮೂರ್ತದ್ರವ್ಯಗಳಿಗೆ ಇರಲು ಅವಕಾಶವನ್ನು ಕೊಡುತ್ತದೆ.

ಅದ್ವಿತೀಯನೂ ಕೂಟಸ್ಥನೂ ಕಾರ್ಯಕಾರಣಭಾವರಹಿತನೂ ಆದ ಆತ್ಮನಿಂದ ಆಕಾಶಾದಿಗಳು ಎಂದಿಗೂ ಹುಟ್ಟಲಾರವು. ಆತ್ಮನ ಒಂದು ಮಾಯಾಶಕ್ತಿಯಿಂದ ಆಕಾಶಾದಿಗಳು ಕಲ್ಪಿತವಾಗಿವೆಯೆಂದೂ ಶ್ರುತಿಯು ಲೋಕವ್ಯವಹಾರಕ್ಕಾಗಿ ಇವೆಲ್ಲವೂ ಕ್ರಮವಾಗಿ ಹುಟ್ಟಿದವೆಂದು ವರ್ಣಿಸುತ್ತಿದೆ ಎಂದೂ ತಿಳಿಯಬೇಕು. ಆಕಾಶದಿಂದ ವಾಯು ಹುಟ್ಟಿತು. ಜನ್ಯವಾದ ಜಡವಸ್ತುವಿನಿಂದ ಯಾವುದೂ ಹುಟ್ಟುವುದಿಲ್ಲ. ಸರ್ವವೂ ಆತ್ಮನಿಂದಲೇ ಹುಟ್ಟಿದೆ. ಆದ ಕಾರಣ ಆಕಾಶದಿಂದ ಎಂದರೆ ಆಕಾಶತಾದಾತ್ಮ್ಯವನ್ನು ಹೊಂದಿದ ಆತ್ಮನಿಂದ ವಾಯು ಹುಟ್ಟಿತು ಎಂದರ್ಥ. ಕಾರಣಗುಣವಾದ ಶಬ್ದವೂ ಹೊಸದಾಗಿ ಬಂದ ಸ್ಪರ್ಶವೂ ಸೇರಿ ಶಬ್ದಸ್ಪರ್ಶಗಳೆರಡು ವಾಯುಗುಣಗಳು. ವಾಯುತಾದಾತ್ಮ್ಯವನ್ನು ಹೊಂದಿದ ಆತ್ಮನಿಂದ ಅಗ್ನಿಯೂ, ಅಗ್ನಿತಾದಾತ್ಮ್ಯವನ್ನು ಹೊಂದಿದ ಆತ್ಮನಿಂದ ಜಲವೂ, ಜಲತಾದಾತ್ಮ್ಯವನ್ನು ಹೊಂದಿದ ಆತ್ಮನಿಂದ ಪೃಥ್ವಿಯೂ ಹುಟ್ಟಿದವೆಂದು ಅರ್ಥ. ಹೀಗೆಯೇ ಮುಂದೆಯೂ ಅನ್ವಯಿಸಿಕೊಳ್ಳಬೇಕು.

ಪೂರ್ವೋಕ್ತ ರೀತಿಯಲ್ಲಿಯೇ ಅಗ್ನಿಯಲ್ಲಿ ಶಬ್ದಸ್ಪರ್ಶರೂಪಗಳಿವೆ. ಜಲದಲ್ಲಿ ಶಬ್ದಸ್ಪರ್ಶರೂಪರಸಗಳೂ ಪೃಥ್ವಿಯಲ್ಲಿ ಶಬ್ದಸ್ಪರ್ಶರೂಪರಸ-ಗಂಧಗಳೆಂಬ ಐದು ಗುಣಗಳಿವೆ.

ಪಂಚಭೂತಗಳಲ್ಲಿ ಅಗ್ನಿಯೆಂದರೆ ತೇಜಸ್ಸು, ಪ್ರಭೆ. ಸೂರ್ಯನ ಪ್ರಕಾಶ, ಮಿಂಚು, ವಿದ್ಯುಚ್ಛಕ್ತಿ-ಇವೆಲ್ಲವೂ ಅಗ್ನಿಯಲ್ಲಿ ಸೇರುತ್ತವೆ. ಆತ್ಮನಿಂದ ಅವ್ಯಾಕೃತಸೂತ್ರಾತ್ಮನೂ, ಸೂತ್ರಾತ್ಮನಿಂದ ಪಂಚಭೂತಾತ್ಮಕನಾದ ವಿರಾಟ್ ಎಂಬ ಬ್ರಹ್ಮನೂ ಹುಟ್ಟಿದರೆಂದು ಪ್ರಮಾಣಾಂತರಗಳಿಂದ ತಿಳಿದು ಬರುತ್ತದೆ. ಅದನ್ನಿಲ್ಲಿ

ಹೇಳಿಲ್ಲ. ಅದೆಲ್ಲವೂ ಮಾಯಾವಿಶಿಷ್ಟನಾದ ಆತ್ಮ ಮತ್ತು ಪಂಚಮಹಾಭೂತಗಳು– ಇವುಗಳಲ್ಲಿ ಸೇರಿಹೋಗತಕ್ಕವು.

**ದಿಗಾದಿಕರಣೋ ದೇವಃ ಪಂಚಭೂತಶರೀರಭೃತ್ ।**
**ಸರ್ವೋಽಸ್ಮೀತ್ಯಭಿಮಾನೇದ್ಧೋ ವಿರಾಡೇವಮಜಾಯತ ॥** ವಾರ್ತಿಕ ೨–೧೫೮

ದಿಕ್ಕುಗಳೇ ಇಂದ್ರಿಯಗಳಾಗಿಯೂ ಪಂಚಭೂತಗಳೇ ಶರೀರವಾಗಿಯೂ ಸರ್ವವೂ ನಾನು ಎಂದು ಅಭಿಮಾನಿಯೂ ಆದ ವಿರಾಟ್ ಎಂಬ ದೇವನು ಜನಿಸಿದನು.

**ಅಸ್ಮಾತ್‌ಪೂರ್ವಂ ಭವೇತ್‌ಸೂತ್ರಂ ತಸ್ಮಿನ್‌ಸತಿ ವಿರಾಡ್‌ಯತಃ ॥** ವಾರ್ತಿಕ ೨–೧೫೯

ವಿರಾಟ್ ಪುರುಷನು ಹುಟ್ಟುವುದಕ್ಕೆ ಮೊದಲು ಹಿರಣ್ಯಗರ್ಭನೆಂಬ ಸೂತ್ರಾತ್ಮನು ಹುಟ್ಟಿದನು. ಹಿರಣ್ಯಗರ್ಭ = ವಿಜ್ಞಾನಾತ್ಮ. ಇವನೇ ಸೂತ್ರಾತ್ಮ.

ಜಗತ್ತಿನಲ್ಲಿರುವ ವೃಕ್ಷಾದಿಸ್ಥಾವರಗಳು, ಪ್ರಾಣಿ ಶರೀರಗಳು–ಇವೆಲ್ಲವೂ ಪಂಚಮಹಾಭೂತಗಳಲ್ಲಿ ಸೇರಿಹೋಗುತ್ತವೆ. ಆತ್ಮನೊಬ್ಬನನ್ನು ಬಿಟ್ಟು ಪಂಚಭೂತಗಳಲ್ಲಿ ಸೇರದ ಯಾವ ವಸ್ತುವೂ ಜಗತ್ತಿನಲ್ಲಿ ಇಲ್ಲ.

**ಅನ್ನಾತ್‌ಪುರುಷಃ**

ರೇತಸ್ಸಾಗಿ ಪರಿಣಮಿಸಿದ ಅನ್ನದಿಂದ (ಆಹಾರದಿಂದ) ಪುರುಷನು ಹುಟ್ಟಿದನು. ಅನ್ನವು ರಕ್ತಮಾಂಸಾದಿ ರೂಪದಲ್ಲಿ ಪರಿಣಮಿಸಿ ರೇತಸ್ಸಾಗುತ್ತದೆ. ಅದು ಸ್ತ್ರೀಯ ಅಂಡದಲ್ಲಿ ಸೇರಿ ಮನುಷ್ಯನೇ ಮೊದಲಾದ ಸಕಲಪ್ರಾಣಿಗಳೂ ಹುಟ್ಟುತ್ತವೆ. ಈ ಮನುಷ್ಯನು ತಂದೆಯ ಅನ್ನರಸದ ವಿಕಾರ. ಆದ್ದರಿಂದ ತಂದೆಯಂತೆ ಮನುಷ್ಯಾಕಾರದವನಾಗಿ ಹುಟ್ಟುತ್ತಾನೆ. ತಂದೆಯ ಆಕಾರವೆಂಬುದು ಸಕಲ ಮೃಗ ಪಕ್ಷಿ ಕ್ರಿಮಿ ಕೀಟಾದಿಗಳಿಗೂ ಸಂಬಂಧಿಸಿರುತ್ತದೆ.

ಜ್ಞಾನಶಕ್ತಿಯೂ ಸಮಸ್ತ ಕ್ರಿಯಾಶಕ್ತಿಯೂ ಸಹ ಮನುಷ್ಯನಲ್ಲಿವೆ. ಆದ್ದರಿಂದ ಮನುಷ್ಯನು ಜೀವಿಗಳಲ್ಲಿ ಮುಖ್ಯನೆಂದು ಗ್ರಹಿಸಿ 'ಅನ್ನಾತ್‌ಪುರುಷಃ' ಎಂದು ಶ್ರುತಿಯು ಹೇಳಿದೆ. ಆದರೂ ಈ ಮನುಷ್ಯನು ಅವಿದ್ಯಾಮಹಾಜಾಲದಲ್ಲಿ ಸಿಕ್ಕಿಕೊಂಡು ಹುಟ್ಟುತ್ತಾನೆ! ಆಂತರತಮವಾದ ಬ್ರಹ್ಮವನ್ನು ತಿಳಿಸಿಕೊಡಲು ಈ ಪುರುಷನೇ(ಮನುಷ್ಯನೇ) ಯೋಗ್ಯನಾದವನು. ಪಶುಗಳಿಗೆ ಇದನ್ನರಿಯಲು ಅರ್ಹತೆಯಿಲ್ಲ. "ಇತರೇಷಾಂ ಪಶೂನಾಮ್ ಅಶನಾಯಾಪಿಪಾಸೇ ಏವ ಅಭಿವಿಜ್ಞಾನಮ್" ಎಂದು ಶ್ರುತಿಯೇ ಹೇಳಿದೆ.

ಅನಾದಿಕಾಲದಿಂದಲೂ ಮನುಷ್ಯನು ಅನ್ನಮಯಾದಿಕೋಶಗಳಲ್ಲಿಯೇ "ನಾನು ನಾನು" ಎಂಬ ಬುದ್ಧಿಯನ್ನು ಗಟ್ಟಿಯಾಗಿ ನಿಲ್ಲಿಸಿಬಿಟ್ಟಿದ್ದಾನೆ. ಬಾಹ್ಯವಾದ ಈ ಕೋಶಗಳಲ್ಲಿಟ್ಟಿರುವ ಬುದ್ಧಿಯನ್ನು ಕ್ರಮವಾಗಿ ತಪ್ಪಿಸಿ, ಸರ್ವಾಂತರವಾದ ಬ್ರಹ್ಮವೇ ನಾನು ಎಂಬ ಬುದ್ಧಿಯನ್ನುಂಟುಮಾಡುವುದಕ್ಕಾಗಿ ನಮಗೆ ಆಪ್ತತಮವಾದ ಉಪನಿಷತ್ತು ಪ್ರಯತ್ನಿಸುತ್ತಿದೆ.

ಈ ಅನ್ನರಸಮಯನಾದ ಪುರುಷನಿಗೆ ಇದೇ ಶಿರಸ್ಸು, ಇದು ಬಲಗೈ, ಇದು ಎಡಗೈ-ಇವು ಎರಡು ರೆಕ್ಕೆಗಳು. ಇವೆರಡರ ನಡುವೆ ಇರುವ ದೇಹದ ಮಧ್ಯಮಭಾಗವು ಆತ್ಮ. (ಆತ್ಮನಿಂದಲೇ ಕಡೆಯಲ್ಲಿ 'ಅನ್ನಾತ್‌ಪುರುಷಃ' ಎಂದು ಹುಟ್ಟಿದ ಮನುಷ್ಯನಿಗೆ ತನ್ನ ದೇಹದ ಮಧ್ಯಭಾಗವೇ ಆತ್ಮ!.) ನಾಭಿಯ ಕೆಳಗಿರುವ ತೊಡೆ, ಕಾಲುಗಳು ಈ ಮಾನವನ ಪುಚ್ಛ. ಭಾರವನ್ನು ಹೊತ್ತಿರುವ ಆಧಾರ. ಪಶುವಿನ ಬಾಲದಂತೆ ಕೆಳಗೆ ಜೋತಿರುವುದರಿಂದ ಪುಚ್ಛಸದೃಶವೆಂದರ್ಥ. ದೇಹವೇ ಆತ್ಮವೆಂದು ತಿಳಿದವನು ಪಶುವೇ ಸರಿ-ಎಂದು ವ್ಯಂಗ್ಯಾರ್ಥ. ಇದೇ ರೀತಿಯಲ್ಲಿ ಮುಂದೆ ಹೇಳುವ ಪ್ರಾಣಮಯಾದಿಗಳಲ್ಲಿಯೂ ರೂಪಕಾಲಂಕಾರದಿಂದ ವರ್ಣನೆ ಇದೆ. ಮಣ್ಣಿನ ಮೂಸೆಯಲ್ಲಿ ಎರಕಹೊಯ್ದ ತಾಮ್ರಾದಿರಸ ಪ್ರತಿಮೆಗಳಂತೆ ಈ ದೇಹವೆಂಬ ಮೂಸೆಯಲ್ಲಿ ಪ್ರಾಣಮಯಾದಿಗಳು ಎರಕಹೊಯ್ದ ಪ್ರತಿಮೆಗಳೆಂದು ಕಲ್ಪಿಸಿಕೊಳ್ಳಬೇಕು.

## ದ್ವಿತೀಯಾನುವಾಕ

**ಅನ್ನಾದ್ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಗ್ಂ ಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿ ಯಂತ್ಯಂತತಃ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್‌ಸರ್ವೌಷಧಮುಚ್ಯತೇ । ಸರ್ವಂ ವೈ ತೇಽನ್ನಮಾಪ್ನುವಂತಿ ।ಯೇಽನ್ನಂ ಬ್ರಹ್ಮೋಪಾಸತೇ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್‌ಸರ್ವೌಷಧಮುಚ್ಯತೇ । ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ । ತಸ್ಮಾದ್ವಾ ಏತಸ್ಮಾದನ್ನರಸಮಯಾತ್ । ಅನ್ಯೋಽಂತರ ಆತ್ಮಾ ಪ್ರಾಣಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಾಣ ಏವ ಶಿರಃ । ವ್ಯಾನೋ ದಕ್ಷಿಣಃ ಪಕ್ಷಃ । ಅಪಾನ ಉತ್ತರಃ ಪಕ್ಷಃ । ಆಕಾಶ ಆತ್ಮಾ । ಪೃಥಿವೀ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥**

ಪಂಚೀಕರಣ ಪ್ರಕ್ರಿಯೆಯಂತೆ ಪಂಚಮಹಾಭೂತಗಳು ಪಂಚೀಕೃತ-ವಾಗುತ್ತವೆ. ಪೃಥಿವೀ ಮುಂತಾದ ಒಂದೊಂದು ಮಹಾಭೂತದಲ್ಲಿಯೂ ಉಳಿದ ನಾಲ್ಕು ಮಹಾಭೂತಗಳ ಅಂಶಗಳು ಸೇರಿಕೊಳ್ಳುತ್ತವೆ. ಪಂಚೀಕೃತ ಮಹಾಭೂತಗಳೆಲ್ಲವೂ ಸೇರಿ ವಿಶ್ವ-ಜಗತ್ ಆಗಿದೆ. ಈ ವಿಶ್ವವೇ ದೇಹವಾಗಿರುವ ಅಂತರ್ಯಾಮಿಯಾದ ಆತ್ಮನಿಗೆ ವಿರಾಟ್ ಎಂದು ಹೆಸರು. ಇವನೇ ವಿರಾಟ್‌ಪುರುಷ. ಪೃಥಿವಿಯು ಪಂಚೀಕೃತವಾದ ಮೇಲೆ ಓಷಧಿ, ಅನ್ನ, ಪುರುಷದೇಹ ಮೊದಲಾದವು ಜನಿಸಿರುತ್ತವೆ. ಆದ್ದರಿಂದ ಹಿಂದೆ ಹೇಳಿದಂತೆ, ಅನ್ನಾತ್ = ವಿರಾಡಾತ್ಮಕವಾದ ಅನ್ನದಿಂದ ಜನರೂ ಪೃಥ್ವಿಯಲ್ಲಿರುವ ಸಕಲ ಸ್ಥಾವರ ಜಂಗಮಗಳೂ ಹುಟ್ಟುತ್ತವೆ. ಓಷಧಿಗಳೂ ಅನ್ನದಿಂದಲೇ ಹುಟ್ಟಿದವು. ಅನ್ನದಿಂದಲೇ ಎಲ್ಲವೂ ವರ್ಧಿಸುತ್ತವೆ. ಅನ್ನದಿಂದಲೇ ಬದುಕುತ್ತವೆ. ಕಡೆಗೆ ಅವೆಲ್ಲವೂ ಅನ್ನದಲ್ಲಿಯೇ ಅಡಗಿಹೋಗುತ್ತವೆ! ಏಕೆಂದರೆ, ಅನ್ನವು ಈ ಎಲ್ಲ ಅನ್ನಮಯ ಜೀವಿಗಳಿಗಿಂತ ಹಿರಿಯದು-ಮೊದಲನೆಯದು. ಸಮಸ್ತ ಜೀವಗಳೂ ಅನ್ನದಿಂದ ಹುಟ್ಟಿ, ಅನ್ನದಿಂದಲೇ ಬದುಕಿ, ಅನ್ನದಲ್ಲಿ ಅಡಗತಕ್ಕವು. ಆದ್ದರಿಂದ ಸರ್ವರ ಜಠರಾಗ್ನಿಗೂ ಅನ್ನವೇ ಔಷಧ!

ಹೀಗೆ ಸಮಸ್ತ ಸ್ಥಾವರಜಂಗಮಗಳ ಜನ್ಮ-ಸ್ಥಿತಿ-ಲಯಗಳಿಗೆ ಕಾರಣವಾದ್ದರಿಂದ ಅನ್ನವೇ ಬ್ರಹ್ಮ. ಯಾರು ಅನ್ನಬ್ರಹ್ಮವನ್ನು ಉಪಾಸನೆ ಮಾಡುತ್ತಾರೋ, ಅವರಿಗೆ ಸಮಸ್ತ ಅನ್ನಜಾತವೂ ದೊರೆಯುತ್ತದೆ. ಹೇಗೆಂದರೆ, ಈ ಅನ್ನಬ್ರಹ್ಮವಿದನು ವಿರಾಡಾತ್ಮನಾಗಿ ಸರ್ವಜೀವಿಗಳಲ್ಲಿಯೂ ಸೇರಿಹೋಗುವುದರಿಂದ ಸಮಸ್ತ ಅನ್ನಜಾತವೂ ದೊರೆಯುವುದು ಸಹಜವಾಗಿದೆ. ಯಾರು ಯಾವ ಬಗೆಯಿಂದ ಉಪಾಸನೆ ಮಾಡುತ್ತಾರೋ ಅವರು ಆ ಬಗೆಯ ವಸ್ತುವೇ ಆಗಿಬಿಡುತ್ತಾರೆ. 'ಅಹಂ ಬ್ರಹ್ಮಾಸ್ಮಿ' ಎಂದು ಉಪಾಸನೆಮಾಡತಕ್ಕವನು ಬ್ರಹ್ಮವೇ ಆಗಿಬಿಡುತ್ತಾನೆ ಎಂದು ಈ ಮಾತಿಗೆ ಫಲಿತವಾದ ತಾತ್ಪರ್ಯ.

ಅನ್ನಶಬ್ದದ ನಿರ್ವಚನ ಹೀಗೆ - ಅದ್ಯತೇ ಅತ್ತಿಚ ಭೂತಾನಿ. ಅಕ್ಕಿ, ಗೋಧಿ-ಮೊದಲಾದ ವಸ್ತುವು ಜೀವಿಗಳಿಂದ ತಿನ್ನಲ್ಪಡುವುದರಿಂದ ಅದಕ್ಕೆ ಅನ್ನವೆಂದು ಹೆಸರು. ಅಪಥ್ಯವಾದ ಆಹಾರವು ಪ್ರಾಣಿಗಳನ್ನು ತಿನ್ನುತ್ತದೆ-ಯಾದ್ದರಿಂದಲೂ ಅನ್ನವೆಂದು ಹೆಸರು! ಅದ-ಭಕ್ಷಣೆ ಎಂಬ ಧಾತುವಿನಿಂದ ಅನ್ನಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಅನ್ನವು ಸೃಷ್ಟಿ ಸ್ಥಿತಿ ಸಂಹಾರಕರ್ತೃ. ಅದ್ ಧಾತುವಿಗೆ ಕ್ತ ಪ್ರತ್ಯಯವನ್ನು ಸೇರಿಸಿದರೆ ಅನ್ನ ಎಂಬ ರೂಪವಾಗುತ್ತದೆ. ಕರ್ಮಾರ್ಥದಲ್ಲಿ ಕ್ತ ಪ್ರತ್ಯಯವು ಸಾರ್ವತ್ರಿಕ. ಕರ್ತ್ರರ್ಥದಲ್ಲಿ ಛಾಂದಸ. ಅನ್ನಮಯ ಶಬ್ದದಲ್ಲಿ 'ದ್ವ್ಯಚಶ್ಛಂದಸಿ'(೪-೩-೧೫೦) ಎಂಬ ಪಾಣಿನಿ ಸೂತ್ರದಿಂದ ವಿಕಾರಾರ್ಥದಲ್ಲಿ ಮಯಟ್ ಪ್ರತ್ಯಯ.

ಇದಿಷ್ಟು ಅನ್ನಮಯಕೋಶದ ವಿಚಾರ. ಇದಾದ ಮೇಲೆ ಕ್ರಮವಾಗಿ ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ-ಎಂಬ ನಾಲ್ಕು ಕೋಶಗಳ ವಿಚಾರ ಬರುತ್ತದೆ. ಈ ಪಂಚಕೋಶಗಳು ಕಲ್ಪಿತವಾದವು. ಕೋಶವು ಕವಚವಿದ್ದಂತೆ ಆವರಣ. ಅಕ್ಕಿಗೆ ಸಿಪ್ಪೆಯಿದ್ದಂತೆ, ಬ್ರಹ್ಮವೆಂಬ ಅಕ್ಕಿಗೆ ಒಂದರಮೇಲೊಂದರಂತಿರುವ ಐದು ಸಿಪ್ಪೆಗಳೇ ಪಂಚಕೋಶಗಳು. ಈ ಕೋಶಗಳು ಅವಿದ್ಯೆಯಿಂದ ಕಲ್ಪಿತವಾದ ಐದು ಮಿಥ್ಯೆಗಳು. ಆದ್ದರಿಂದ ಅದ್ವೈತಕ್ಕೆ ಹಾನಿಯಿಲ್ಲ. ಅನ್ನಮಯ ಕೋಶವು ಎಲ್ಲಕ್ಕೂ ಮೇಲಿರುವ ದಪ್ಪವಾದ ಸಿಪ್ಪೆ. ಅವಿದ್ಯಾಮೋಹಿತರಾದ ಜನರು ಸ್ಥೂಲವಾದ ಈ ಸಿಪ್ಪೆ-ಹೊಟ್ಟುಗಳನ್ನೇ ಬ್ರಹ್ಮವೆಂದು ಭಾವಿಸಿರುತ್ತಾರೆ. ಅಂತಹವರಿಗೆ ನೇರವಾಗಿ ಸರ್ವಾಂತರವಾದ ಬ್ರಹ್ಮವನ್ನು ಗ್ರಹಿಸುವುದು ಶಕ್ಯವಾದ್ದಲ್ಲ. ಮೇಲ್ಗಡೆಯ ಸಿಪ್ಪೆಗಳಲ್ಲಿ ತೊಡಗಿರುವ ಬುದ್ಧಿಯನ್ನು ಇದಲ್ಲ, ಇದಲ್ಲವೆಂದು ಮನಗಾಣಿಸಿ ಕ್ರಮವಾಗಿ ಅಂತರತಮನಾದ ಪ್ರತ್ಯಗಾತ್ಮನವರೆಗೆ ಒಯ್ಯುವುದು ಈ ಪಂಚಕೋಶ ಪ್ರಕ್ರಿಯೆಗಳ ಉದ್ದೇಶವಾಗಿರುತ್ತದೆ.

ನಾನು ಯಾರು, ನಾನು ಯಾರು? ಎಂದು ವಿಚಾರದಲ್ಲಿ ತೊಡಗಿದಾಗ ಅಂತರತಮನಾದ ಆತ್ಮನು ಪ್ರತ್ಯಗಾತ್ಮನೆನಿಸುತ್ತಾನೆ. ನೀನು ಯಾರು? ಅವನು ಯಾರು? ಎಂದು ವಿಚಾರದಲ್ಲಿ ತೊಡಗಿದಾಗ ಅಂತರತಮನಾದ ಆತ್ಮನು ಪರಾಗಾತ್ಮನೆನಿಸುತ್ತಾನೆ. ಪ್ರತ್ಯಗಾತ್ಮನ ಅನ್ವೇಷಣೆಯಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಬೋಧವೂ ಪರಾಗಾತ್ಮನ ಅನ್ವೇಷಣೆಯಿಂದ 'ತತ್ತ್ವಮಸಿ' ಎಂಬ ಬೋಧವೂ ಉಂಟಾಗುತ್ತವೆ. ಜಡವಸ್ತುಗಳಾದ ನೆಲ, ಜಲ, ಕಲ್ಲು-ಮೊದಲಾದ್ದರಲ್ಲಿ ಜಡವಸ್ತುಗಳಿಗೆ ಬೋಧಿಸಬೇಕಾದ್ದೇನೂ ಇಲ್ಲವಾದ್ದರಿಂದ ಈ ಪಂಚಕೋಶಗಳ ಅನ್ವೇಷಣೆ ಅವುಗಳಲ್ಲಿ ಇಲ್ಲ. ಪ್ರತ್ಯಗಾತ್ಮ ಪರಾಗಾತ್ಮಗಳ ಸ್ವರೂಪವು ನಿಶ್ಚಿತವಾದ ಮೇಲೆ ಜಡವಸ್ತುಗಳ ಅಧಿಷ್ಠಾನವೂ ಆತ್ಮನೇ ಎಂಬ ಬೋಧ ಉಂಟಾಗಲು ತಡವಾಗುವುದಿಲ್ಲ. ಆಗ "ಸರ್ವಂ ಖಲ್ವಿದಂ ಬ್ರಹ್ಮ" ಎಂದು ನಿಶ್ಚಿತವಾದ ಬೋಧ ಉಂಟಾಗುತ್ತದೆ. ಮುಮುಕ್ಷುವು ಕೃತಾರ್ಥನಾಗುತ್ತಾನೆ. "ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ" ಎಂಬ ಬ್ರಹ್ಮ ಒಂದೇ ಕಲ್ಪಿತವಲ್ಲದ ಸರ್ವಾತ್ಮ.

ಅನ್ನಮಯಕ್ಕಿಂತ ವ್ಯತಿರಿಕ್ತವಾಗಿ ಅಂತರತಮವಾದದ್ದು ಪ್ರಾಣಮಯಕೋಶ. ಪ್ರಾಣವೆಂದರೆ ವಾಯು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಹೆಸರುಗಳಿಂದ ಈ ವಾಯುವು ಅನ್ನಮಯದೊಳಗೆ ತುಂಬಿಕೊಂಡಿದೆ. ಅನ್ನಮಯವು ಹೇಗೆ ಪುರುಷ ಎನ್ನಿಸಿಕೊಂಡಿದೆಯೋ ಹಾಗೇ ಈ ಪ್ರಾಣಮಯವೂ ಸಹ ಮೂಸೆಯಲ್ಲಿ ಎರಕಹೊಯ್ದ ದ್ರವದಂತೆ

ಪುರುಷಾಕೃತಿಯಾಗಿದೆ. ಉಸಿರಿನ ರೂಪದಲ್ಲಿರುವ ವಾಯು ಶಿರಸ್ಸು. ಆಕಾಶ ಆತ್ಮಾ = ಮಧ್ಯದ ನಾಭಿಸ್ಥಾನದ ಆಕಾಶದಲ್ಲಿರುವ ಸಮಾನವು ಆತ್ಮ. ಶ್ರುತಿವಚನ ಬಲದಿಂದ ಈ ಅವಯವಗಳು ಕಲ್ಪಿತವಾದವುಗಳು.

## ತೃತೀಯಾನುವಾಕ

**ಪ್ರಾಣಂ ದೇವಾ ಅನುಪ್ರಾಣಂತಿ । ಮನುಷ್ಯಾಃ ಪಶವಶ್ಚ ಯೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷಮುಚ್ಯತೇ । ಸರ್ವಮೇವ ತ ಆಯುರ್ಯಂತಿ । ಯೇ ಪ್ರಾಣಂ ಬ್ರಹ್ಮೋಪಾಸತೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷಮುಚ್ಯತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾತ್ ಪ್ರಾಣಮಯಾತ್ । ಅನ್ಯೋಽಂತರ ಆತ್ಮಾ ಮನೋಮಯಃ । ತೇನೈಷಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯಯಜುರೇವ ಶಿರಃ । ಋಗ್ ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ । ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋಭವತಿ ॥೧॥**

**ಪ್ರಾಣಂ ದೇವಾ ಅನುಪ್ರಾಣಂತಿ**

ಅಗ್ನ್ಯಾದಿದೇವತೆಗಳು ಸೂತ್ರಾತ್ಮನ ವಿಭೂತಿಗಳೆಂದು ಶಾಕಲ್ಯ ಬ್ರಾಹ್ಮಣವು ತಿಳಿಸಿದೆ. ಈ ದೇವತೆಗಳು ಕ್ರಿಯಾಶಕ್ತಿಯುಳ್ಳ ಪ್ರಾಣವನ್ನವಲಂಬಿಸಿಕೊಂಡು ಕ್ರಿಯಾಶಕ್ತಿಯನ್ನು ಪಡೆಯುತ್ತಾರೆ. ಅಥವಾ ಇದು ಅಧ್ಯಾತ್ಮ ಪ್ರಕರಣವಾದ್ದರಿಂದ ದೇವಾ ಎಂದರೆ ಇಂದ್ರಿಯಗಳು. ಅಧ್ಯಾತ್ಮ = ಅಧಿದೇಹ. ಇಂದ್ರಿಯಗಳೂ ವಿಶೇಷವಾಗಿ ಮನುಷ್ಯರೂ ಪಶುಗಳೂ ಪ್ರಾಣವನ್ನವಲಂಬಿಸಿ ಕ್ರಿಯೆಯನ್ನು ನಡೆಸುತ್ತಾರೆ. ಪ್ರಾಣವಿಲ್ಲದಿದ್ದರೆ ಯಾವ ಕ್ರಿಯೆಯೂ ನಡೆಯುವುದಿಲ್ಲ. ಮನುಷ್ಯಾದಿ ಸಕಲಪ್ರಾಣಿಗಳೂ ಕೇವಲ ಅನ್ನಮಯ ಕೋಶದಿಂದಲೇ ಜೀವಿಸಿರುವುದಿಲ್ಲ. ಇನ್ನೂ ಸೂಕ್ಷ್ಮಗಳಾದ ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಅವಿದ್ಯಾಕೃತ ಕೋಶಗಳಾದ ಆತ್ಮಗಳಿಂದ ಬದುಕಿವೆ. ಪರಬ್ರಹ್ಮವು ಇವೆಲ್ಲವುಗಳಿಗೂ ಆತ್ಮವಾಗಿದೆ.

ಮನಸ್ಸೆಂದರೆ ಸಂಕಲ್ಪವಿಕಲ್ಪಾದಿಗಳನ್ನು ಮಾಡುವ ಅಂತಃಕರಣ. ಇದು ಪ್ರಾಣಮಯಕ್ಕಿಂತ ಆಭ್ಯಂತರವಾದ ಮನೋಮಯ ಕೋಶವೆನಿಸಿದೆ. ಅನ್ವಯಂ

ಪುರುಷವಿಧಃ = ಅಯಂ = ಈ ಮನೋಮಯ ಕೋಶವು, ಅನು = ಪ್ರಾಣಮಯವನ್ನನುಸರಿಸಿ, ಪುರುಷನಂತೆ ಇದೆ. ಆದರೆ ಈ ಮನೋಮಯನಿಗೆ ಯಜುರ್ಮಂತ್ರವು ಶಿರಸ್ಸು, ಋಙ್ಮಂತ್ರವು ಬಲಗೈ-ಮುಂತಾದ ರೂಪಕವು ಹೇಗೆ ಹೊಂದುತ್ತದೆ? ಮನಸ್ಸಿಗೆ ವೇದವು ಅವಯವವಾಗುತ್ತದೆಯೆ?

ಉಪನಿಷತ್ತಿನ ಆಶಯ ಹೀಗಿದೆ – ವೇದಗಳು ಮನೋವೃತ್ತಿ ವಿಶೇಷಗಳಾದ್ದರಿಂದ, ಅವು ಮನಸ್ಸಿನ ಅವಯವಗಳೆಂಬ ಕಲ್ಪನೆ ಯುಕ್ತವಾಗಿದೆ. ಒಂದಾನೊಂದು ಆನುಪೂರ್ವಿಯಿಂದ ಕೂಡಿದ ಶಬ್ದವಿಶೇಷಗಳೇ ವೇದಗಳೆಂದು ಲೋಕಪ್ರಸಿದ್ಧಿಯುಂಟು. ಶಬ್ದವಿಶೇಷಗಳನ್ನು ವೇದವೆನ್ನುವುದು ಗೌಣಪ್ರಯೋಗ. ತಾಲ್ವಾದಿಸ್ಥಾನಗಳಲ್ಲಿ ಪ್ರಯತ್ನವಿಶೇಷದಿಂದ ವಾಯುವಿನ ಅಭಿಘಾತವಾದಾಗ ಹುಟ್ಟುವ ಧ್ವನಿಗಳು ಬೇರೆ ಬೇರೆ ಅಕ್ಷರಗಳನ್ನು ಅಭಿವ್ಯಂಜಿಸುತ್ತವೆ. ಈ ಅಕ್ಷರಗಳ ಸಮುದಾಯವೇ ಪದ. ಪದಗಳ ಸಮೂಹವೇ ವಾಕ್ಯ. ಉದಾತ್ತಾದಿ ಸ್ವರಸಹಿತವಾದ ವಾಕ್ಯವಿಶೇಷಗಳನ್ನು ಮನೋವೃತ್ತಿಯು ಗ್ರಹಿಸುತ್ತದೆ. ಇದು ಋಕ್, ಇದು ಯಜುಸ್, ಇದು ಸಾಮ ಎಂದು ಸಂಕಲ್ಪಿಸುವ ಮನೋವೃತ್ತಿಯೇ ಋಗಾದಿಮಂತ್ರವೆಂದು ತಿಳಿಯಬೇಕು. ಆದ್ದರಿಂದಲೇ ಮಾನಸಜಪವೆನ್ನುವುದು ಉಪಪನ್ನವಾಗುತ್ತದೆ. ಮಂತ್ರದ ಆವೃತ್ತಿಯೇ ಜಪ. ಮನೋವೃತ್ತಿಯು ಕ್ರಿಯೆಯಾದ್ದರಿಂದ ಅದನ್ನು ಆವರ್ತಿಸಬಹುದು. ಶಬ್ದವು ಮಂತ್ರವಾದರೆ ಶಬ್ದವು ದ್ರವ್ಯವಾದ್ದರಿಂದ ಅದನ್ನು ಆವರ್ತಿಸಲು ಶಕ್ಯವಾಗುವುದಿಲ್ಲ. ಗಡಿಗೆಯನ್ನು ಆವರ್ತಿಸಲು ಬರುವುದಿಲ್ಲ. ಕ್ರಿಯೆಯನ್ನು ಆವರ್ತಿಸಬಹುದು.

ಹಾಗಾದರೆ ವೇದಾಧ್ಯಯನ ಮಾಡುತ್ತಾನೆ ಎಂಬ ಮಾತು ಹೇಗೆ ಹೊಂದುತ್ತದೆ? ಮನೋವೃತ್ತಿಯನ್ನು ಶಿಷ್ಯನು ಅಧ್ಯಯನ ಮಾಡುತ್ತಾನೆಯೆ? ಹಾಗಲ್ಲ; ಅದು ಗೌಣಪ್ರಯೋಗ. ಮನೋವೃತ್ತಿಗೆ ವಿಷಯವಾದ ಶಬ್ದಾನುಪೂರ್ವಿಯನ್ನು ಅಧ್ಯಯನ ಮಾಡುತ್ತಾನೆ ಎಂದರ್ಥ. ಮನೋವೃತ್ತಿಯೆಂದರೆ ಜ್ಞಾನ. ಏವಂಚ ಮಂತ್ರವು ಜ್ಞಾನರೂಪವೇ ಹೊರತು ಶಬ್ದರೂಪವಲ್ಲ. ಹಾಗಾದರೆ ವೇದವು ನಿತ್ಯವೆನ್ನುವುದು ಹೇಗೆ? ಮನೋವೃತ್ತಿಯಾದ ಜ್ಞಾನವು ನಿತ್ಯವಲ್ಲವಷ್ಟೆ?

ವೃತ್ತಿಜ್ಞಾನವು ಆತ್ಮಚೈತನ್ಯದಿಂದ ವ್ಯಾಪ್ತವಾದದ್ದು. ಬಾಹ್ಯವಾದ ಶಬ್ದರೂಪವೇದವು ಮನೋವೃತ್ತಿಯಾದ ಜ್ಞಾನಕ್ಕೆ ವಿಷಯವಾಗುವಂತೆ ಆತ್ಮಚೈತನ್ಯಕ್ಕೆ(ಜ್ಞಾನಸ್ವರೂಪನಾದ ಆತ್ಮನಿಗೆ) ವಿಷಯವಾಗಿಯೇ ಇರುತ್ತದೆ. ಮನಸ್ಸು(ಅಂತಃಕರಣವು) ಆತ್ಮಚೈತನ್ಯಕ್ಕೆ ಉಪಾಧಿ. ಮನೋವೃತ್ತ್ಯುಪಾಧಿ ಪರಿಚ್ಛಿನ್ನವಾಗಿ ಮನೋವೃತ್ತಿ ನಿಷ್ಠವಾದ ಪೂರ್ವೋಕ್ತ ವೇದಶಬ್ದಗಳನ್ನು ಗ್ರಹಿಸುವ

ಆತ್ಮಚೈತನ್ಯವೇ ವೇದ. ಆದ್ದರಿಂದಲೇ ವೇದವು ನಿತ್ಯವೆಂದು ಪ್ರಸಿದ್ಧವಾಗಿದೆ. ಇದನ್ನೇ ಭಾಷ್ಯಕಾರರು "ಮನೋವೃತ್ತ್ಯುಪಾಧಿಪರಿಚ್ಛಿನ್ನಂ ಆತ್ಮವಿಜ್ಞಾನಂ ಮಂತ್ರಾಃ" ಎಂದು ಹೇಳಿದ್ದಾರೆ.

ಮನೋಮಯಕೋಶಕ್ಕೆ ಋಗಾದಿವೇದಗಳು ಅವಯವಗಳೆಂದು ಹೇಳಿರುವ ಈ ಉಪನಿಷತ್ತು ಮೇಲ್ಕಂಡಂತೆ ವ್ಯಾಖ್ಯಾನಮಾಡಲು ಪ್ರಮಾಣವಾಗಿದೆ. ಶಿರಸ್ಸು, ಬಲಗೈ ಮುಂತಾದ ಆರೋಪಗಳು ಉಪಾಸನೆಗಾಗಿ. ಅಲ್ಲದೆ 'ಸರ್ವೇ ವೇದಾ ಯತ್ರೈಕಂ ಭವಂತಿ, ಸ ಮಾನಸೀನ ಆತ್ಮಾ ಜನಾನಾಮ್' (ತೈ.ಆ. ೩-೧೧-೧) ಎಂದು ಶ್ರುತಿ ಇದೆ. ಸಕಲವೇದಗಳೂ ಯಾವ ಚಿದೇಕರಸವಾದ ಆತ್ಮನಲ್ಲಿ ಏಕವಾಗಿ ಬಿಡುತ್ತವೆಯೋ, ಸ ಮಾನಸೀನಃ = ಮನಸ್ಸಿನಲ್ಲಿ ಸಾಕ್ಷಿಯಾಗಿರತಕ್ಕ ಆತನು ಎಲ್ಲ ಜನರ ಆತ್ಮನು–ಎಂದು ಈ ಶ್ರುತಿಯ ಅರ್ಥ. ಜನರ ಆತ್ಮ ಎಂದರೆ ಜನರ ವಾಸ್ತವ ಸ್ವರೂಪವೆಂದು ಅರ್ಥ. ಆತ್ಮಚೈತನ್ಯವೇ ವೇದ ಎಂಬುದಕ್ಕೆ ಇದೂ ಒಂದು ಪ್ರಮಾಣವಾಗಿದೆ. ಆದ್ದರಿಂದಲೇ ವೇದವು ನಿತ್ಯವೆಂಬುದೂ ಅದ್ವೈತಸಿದ್ಧಾಂತದಲ್ಲಿ ಸರಳವಾಗಿ ಸಿದ್ಧಿಸುತ್ತದೆ. 'ಋಚೋಕ್ಷರೇ ಪರಮೇವ್ಯೋಮನ್ ಯಸ್ಮಿನ್ ದೇವಾ ಅಧಿವಿಶ್ವೇನಿಷೇದುಃ' ಎಂಬ ಮಂತ್ರವೂ ಸಹ ಬ್ರಹ್ಮದಲ್ಲಿ ವೇದಗಳೂ ದೇವತೆಗಳೂ ಬ್ರಹ್ಮಸ್ವರೂಪದಲ್ಲಿ ನೆಲೆಸಿವೆ ಎಂದು ಹೇಳುತ್ತದೆ. ಆದೇಶ ಆತ್ಮಾ = ಕರ್ತವ್ಯವನ್ನು ಹೀಗೆ ಮಾಡಬೇಕೆಂದು ವಿಧಿಸುವ ಬ್ರಾಹ್ಮಣವು ಮನೋಮಯಕೋಶದ ಆತ್ಮ. ಅಥರ್ವವೇದವು ಈ ಕೋಶದ ಪುಚ್ಛರೂಪವಾದ ಪ್ರತಿಷ್ಠೆ.

## ಚತುರ್ಥಾನುವಾಕ

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಽಂತರ ಆತ್ಮಾ ವಿಜ್ಞಾನಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಶ್ರದ್ಧೈವ ಶಿರಃ । ಋತಂ ದಕ್ಷಿಣಃ ಪಕ್ಷಃ । ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ । ಮಹಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥**

ಆರಂಭದಲ್ಲಿ ಪ್ರಕೃತವಾದದ್ದು ಮನೋಮಯಕೋಶ. ಅದು ವೇದರೂಪವಾದದ್ದು. ಮನೋವೃತ್ತಿಯೆಂಬ ಉಪಾಧಿಯಿಂದ ಕೂಡಿದ ಆತ್ಮಚೈತನ್ಯವೇ ವೇದವೆಂದು ಹಿಂದೆ ಹೇಳಲಾಗಿದೆ. ಮನೋವೃತ್ತಿಯು

'ಅಗ್ನಿಮೀಳೇ ಪುರೋಹಿತಂ' ಇತ್ಯಾದಿ ಶಬ್ದವಿಶಿಷ್ಟವಾದದ್ದು. ಆತ್ಮಚೈತನ್ಯವು ಜ್ಞಾನರೂಪವಾದದ್ದು. ಹೀಗೆ ಶಬ್ದೋಪಾಧಿವಿಶಿಷ್ಟ ಚೈತನ್ಯವೇ ಶಬ್ದಬ್ರಹ್ಮ. ಬ್ರಹ್ಮಣಃ = ಈ ಶಬ್ದಬ್ರಹ್ಮದ, ಆನಂದಂ = ಆತ್ಮಸ್ವರೂಪವಾದ ಆನಂದವೆಂಬ ಪರಬ್ರಹ್ಮವು ವಾಙ್ಮನಸಗಳಿಗೆ ಅಗೋಚರವಾದದ್ದು. ಇದನ್ನು ವಿದ್ವಾನ್ = ತಿಳಿದವನು, ನ ಬಿಭೇತಿಕದಾಚನ = ಎಂದಿಗೂ ಯಾವುದಕ್ಕೂ ಹೆದರುವುದಿಲ್ಲ. ಏಕೆಂದರೆ ಆತನು ಬ್ರಹ್ಮವೇ ಆಗಿಬಿಡುವುದರಿಂದ ಹೆದರುವುದಕ್ಕೆ ದ್ವಿತೀಯ ವಸ್ತುವೇ ಇರುವುದಿಲ್ಲ. ತಸ್ಯೈಷ ಏವ ಶಾರೀರ ಆತ್ಮಾ ಯಃ ಪೂರ್ವಸ್ಯ = ಪೂರ್ವದಲ್ಲಿ ಹೇಳಿದ ಪ್ರಾಣಮಯನಿಗೆ, ಅವನ ಶರೀರದಲ್ಲಿರುವ ಈ ಮನೋಮಯನು ಆತ್ಮನಾಗಿದ್ದಾನೆ.

ಈ ಪ್ರಕಾರದಿಂದ ಸರ್ವತ್ರ ಅರ್ಥಮಾಡಿಕೊಳ್ಳಬೇಕು. ಮನೋಮಯನ ಒಳಗಿರತಕ್ಕವನು ವಿಜ್ಞಾನಮಯನಾದ ಆತ್ಮ. ಮನೋಮಯನೆಂದರೆ ವೇದಾತ್ಮಕನೆಂದು ಹಿಂದೆ ಹೇಳಿದ್ದಾಯಿತು. ಮನಸ್ಸು ಸಂಕಲ್ಪರೂಪವಾದದ್ದು. ವಿಜ್ಞಾನವು ನಿಶ್ಚಯಾತ್ಮಕವಾದ ಬುದ್ಧಿ. ಪ್ರಕೃತದಲ್ಲಿ ಮನೋವಿಜ್ಞಾನಗಳೆರಡೂ ವೇದಕ್ಕೆ ಸಂಬಂಧಿಸಿದವು. ಪರಮಾರ್ಥದಲ್ಲಿ ವೇದವೆಂದರೆ ಜ್ಞಾನಸ್ವರೂಪವಾದ ಚೈತನ್ಯವೆಂದು ಹಿಂದೆ ಹೇಳಿದೆ. ನಿಶ್ಚಯಜ್ಞಾನವಿದ್ದವನಿಗೆ ಕರ್ತವ್ಯಕರ್ಮದಲ್ಲಿ ಮೊದಲು ಶ್ರದ್ಧೆಯಿರುವುದರಿಂದ ಅದು ಪ್ರಧಾನವಾದದ್ದು. ಆದ್ದರಿಂದ ಶ್ರದ್ಧೆಯು ಶಿರಸ್ಸು. ಹಿಂದೆ ಹೇಳಿದ ಋತಸತ್ಯಗಳು ಎರಡು ಬಾಹುಗಳು. ಯೋಗವೆಂದರೆ ಚಿತ್ತಸಮಾಧಾನ. ಅದು ವಿಜ್ಞಾನಮಯನ ಆತ್ಮ. ಮಹ ಎಂದರೆ ಮಹತ್ತತ್ತ್ವ. ಅದೇ ಮೊದಲು ಉತ್ಪನ್ನವಾದ ಹಿರಣ್ಯಗರ್ಭ. 'ಮಹದ್ಯಕ್ಷಂ ಪ್ರಥಮಜಂ ವೇದ (ಬೃಹ. ೫-೪-೧). ಯಕ್ಷ = ಪೂಜ್ಯ. ಕಾರಣವು ಕಾರ್ಯಕ್ಕೆ ಪ್ರತಿಷ್ಠಾಸ್ಥಾನ. ವೃಕ್ಷಕ್ಕೆ ಪೃಥ್ವಿ ಇದ್ದಂತೆ. ಆದ್ದರಿಂದ ವಿಜ್ಞಾನಮಯನಿಗೆ ಕಾರಣವಾದ ಮಹತ್ತತ್ತ್ವವು ಪ್ರತಿಷ್ಠಾಸ್ಥಾನ. ಮಹತ್ತತ್ತ್ವವೇ ಹಿರಣ್ಯಗರ್ಭ. ಅವನೇ ಬ್ರಹ್ಮ. 'ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತ.' ವಿಜ್ಞಾನಮಯನನ್ನು ವರ್ಣಿಸುವ ಶ್ಲೋಕವು(ಮಂತ್ರ) ಮುಂದೆ ಇದೆ.

## ಪಂಚಮಾನುವಾಕ

**ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ । ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮ ಚೇದ್ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ । ಸರ್ವಾನ್ ಕಾಮಾನ್ ತ್ಸಮಶ್ನುತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ**

**ಏತಸ್ಮಾದ್ವಿಜ್ಞಾನಮಯಾತ್ । ಅನ್ಯೋಽಂತರ ಆತ್ಮಾನಂದಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷ ವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃಪಕ್ಷಃ । ಪ್ರಮೋದ ಉತ್ತರಃಪಕ್ಷಃ । ಆನಂದ ಆತ್ಮಾ । ಬ್ರಹ್ಮಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥೧॥**

ವೇದಾರ್ಥವನ್ನು ಸರಿಯಾಗಿ ತಿಳಿದಿರುವುದು ವಿಜ್ಞಾನ. ಈ ವಿಜ್ಞಾನವು ವೇದೋಕ್ತವಾದ ಯಜ್ಞಾದಿಕರ್ಮಗಳನ್ನೂ ಲೌಕಿಕಕರ್ಮಗಳನ್ನೂ ಮಾಡುತ್ತದೆ. ಇಲ್ಲಿ ವಿಜ್ಞಾನವೆಂದರೆ ನಿಶ್ಚಯಜ್ಞಾನವುಳ್ಳವನು ಎಂದು ಅರ್ಥ. "ಪರಮೇವ ಹಿ ತದ್ ಬ್ರಹ್ಮ ಬುದ್ಧಿಕಂಚುಕಭೃತ್ ಸ್ವಯಮ್" ಎಂದು ವಾರ್ತಿಕದಲ್ಲಿದೆ. ಬುದ್ಧಿಯ ಆವರಣವುಳ್ಳ ಪರಬ್ರಹ್ಮವೇ ವಿಜ್ಞಾನವೆಂದು ಅದರ ಅರ್ಥ. ಅದೇ ಜೀವ.

ವೇದಾರ್ಥವನ್ನು ಬಲ್ಲ ಸಾತ್ತ್ವಿಕಜ್ಞಾನವೇ ವಿಜ್ಞಾನಮಯ ಕೋಶ. ಈ ವಿಜ್ಞಾನಮಯ ಕೋಶವೇ ವಸ್ತುತಃ ಜೀವಾತ್ಮನೆಂದು ತಿಳಿಯಬೇಕು. ಬುದ್ಧಿಯೆಂಬ ಉಪಾಧಿಯಿಂದ ಕೂಡಿದ ಬ್ರಹ್ಮವೇ ವಿಜ್ಞಾನವಾದ್ದರಿಂದ ಇದು ಪ್ರಥಮಜನ್ಯವಾದ ಅಪರಬ್ರಹ್ಮವೆಂದು ಅಗ್ನಿಯೇ ಮೊದಲಾದ ದೇವತೆಗಳು ಇದನ್ನು ಉಪಾಸನೆ ಮಾಡುತ್ತಾರೆ. ಈ ಅಪರಬ್ರಹ್ಮವನ್ನು ಸರಿಯಾಗಿ ತಿಳಿದು, ಯಾವ ಪ್ರಮಾದವನ್ನೂ ಮಾಡದೆ ಯಾರು ನನ್ನ ಆತ್ಮನೆಂದು ಉಪಾಸನೆ ಮಾಡುತ್ತಾರೋ ಅವರ ಪಾಪಗಳೆಲ್ಲವೂ ನಶಿಸುತ್ತವೆ. ಜನರು ಶರೀರವೇ ನಾನು ಎಂದು ತಿಳಿದು ಪಾಪಕರ್ಮಗಳನ್ನು ಮಾಡುತ್ತಾರೆ. ವಿಜ್ಞಾನಮಯನೇ ನಾನು ಎಂದು ನಿಶ್ಚಯಿಸಿದವನ ಪಾಪಗಳು ಶರೀರದಲ್ಲಿಯೇ ಉಳಿಯುತ್ತವೆ. ಶರೀರವನ್ನು ತ್ಯಜಿಸಿದ ಮೇಲೆ ಅವನು ವಿಜ್ಞಾನಮಯ ಸ್ವರೂಪನೇ ಆಗಿ ದೇವತೆಗಳಂತೆ ಸುಖಗಳನ್ನು ಪಡೆದು ವಿಹರಿಸುತ್ತಾನೆ – ಎಂದು ಅಭಿಪ್ರಾಯ. ದೇವತೆಗಳು ವಿಜ್ಞಾನಮಯನನ್ನು ಆತ್ಮನೆಂದು ಉಪಾಸನೆಮಾಡುತ್ತಾರೆ– ಎಂದದ್ದು ಇದಕ್ಕಾಗಿ.

ಈ ವಿಜ್ಞಾನಮಯನೇ ಶರೀರದಲ್ಲಿರುವ ಮನೋಮಯನ ಆತ್ಮ. ಬುದ್ಧ್ಯುಪಾಧಿಕ ಜೀವನೇ ವಿಜ್ಞಾನಮಯ ಕೋಶ.

ವಿಜ್ಞಾನಮಯನಿಗಿಂತ ಅತಿರಿಕ್ತನೂ ಅಂತಃಸ್ಥನೂ ಆದವನು ಆನಂದಮಯನೆಂಬ ಆತ್ಮ. ಆನಂದಸ್ಯ ವಿಕಾರಃ ಆನಂದಮಯಃ – ಎಂದು ಈ ಶಬ್ದದ ವ್ಯುತ್ಪತ್ತಿ. 'ನಿತ್ಯಂ ವೃದ್ಧಶರಾದಿಭ್ಯಃ' (೪-೩-೧೪೪) ಎಂಬ ಪಾಣಿನಿಸೂತ್ರದಿಂದ ಮಯಟ್‌ಪ್ರತ್ಯಯ ಬಂದಿದೆ. ವಿಕಾರವೆಂದರೆ ಅವಸ್ಥಾಂತರ.

ಆನಂದಮಯನೆಂದರೆ ಆನಂದದ ಇನ್ನೊಂದು ಸ್ವರೂಪ. ಆನಂದವೇ ಅಲ್ಲ-ಎಂದರ್ಥ. ಸಕ್ಕರೆ ಮಿಠಾಯಿಯಲ್ಲಿ ಕೊಬ್ಬರಿ ಸೇರಿರುತ್ತದೆ. ಮಿಠಾಯಿ ಸಕ್ಕರೆಯ ವಿಕಾರ, ಬರಿಯ ಸಕ್ಕರೆಯೇ ಅಲ್ಲ.

ಆನಂದಮಯನೆಂದರೆ ಪರಮಾತ್ಮನೆಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಅನ್ನಮಯಾದಿ ಕಾರ್ಯಾತ್ಮ ಪ್ರಕರಣದಲ್ಲಿ ಬಂದಿರುವುದರಿಂದ ಆನಂದಮಯನು ಜೀವನೇ ಹೊರತು ಪರಮಾತ್ಮನಲ್ಲ. ಅಲ್ಲದೆ "ಆನಂದಮಯಮಾತ್ಮಾನಮುಪಸಂಕ್ರಮ್ಯ" ಎಂದು ಶ್ರುತವಾಗಿದೆ. ಆನಂದಮಯನೇ ಪರಮಾತ್ಮನಾದರೆ, ತನ್ನನ್ನು ತಾನೇ ಪ್ರವೇಶಿಸುತ್ತಾನೆ ಎಂಬ ಅಪಾರ್ಥವು ಬರುತ್ತದೆ. ಮತ್ತು 'ತಸ್ಯಪ್ರಿಯಮೇವ ಶಿರಃ' ಇತ್ಯಾದಿ ವರ್ಣನೆಗಳೂ ಹೊಂದುವುದಿಲ್ಲ. ಆನಂದಮಯನಿಗೆ ಶಿರಸ್ಸು, ಬಾಹು-ಮುಂತಾದ ಅವಯವಗಳಿವೆಯೆಂದು ಅಲ್ಲಿ ವರ್ಣಿಸಿದೆ. ಪರಮಾತ್ಮನಿಗೆ ಶಿರಸ್ಸು ಮುಂತಾದ ಅವಯವಗಳುಂಟೆ? ನೇತಿ ನೇತಿ (ಬೃಹ. ೩-೯-೨೬) ಇತ್ಯಾದಿ ಶ್ರುತಿಗಳು ಪರಮಾತ್ಮನಿಗೆ ಯಾವ ಆಕೃತಿಯೂ ಇಲ್ಲವೆಂದು ಸಾರಿ ಹೇಳಿವೆ. ಆದ್ದರಿಂದ ಆನಂದಮಯನು ಪರಮಾತ್ಮನಲ್ಲ. ಅದೃಶ್ಯೇಽನಾತ್ಮ್ಯೇ (ತೈ. ೨-೭) ಇತ್ಯಾದಿ ಶ್ರುತಿಗಳು ಪರಬ್ರಹ್ಮವು ಅದೃಶ್ಯವಾದ್ದೆಂದೂ ಅದಕ್ಕೆ ಶರೀರವಿಲ್ಲವೆಂದೂ ಹೇಳುತ್ತವೆ. ಬ್ರಹ್ಮಪುಚ್ಛಂ ಪ್ರತಿಷ್ಠಾ-ಎಂದು ಹೇಳಿರುವುದೂ ಹೊಂದುವುದಿಲ್ಲ. ಆನಂದಮಯನು ಬ್ರಹ್ಮವಾದರೆ, ಅದಕ್ಕೆ ಬ್ರಹ್ಮವೇ ಹೇಗೆ ಪುಚ್ಛವಾಗುತ್ತದೆ? ಮತ್ತು ಬ್ರಹ್ಮವೇ ಹೇಗೆ ಅದಕ್ಕೆ ಪ್ರತಿಷ್ಠೆ(ಆಶ್ರಯ)ವಾಗುತ್ತದೆ. ತನ್ನ ಹೆಗಲಮೇಲೆ ತಾನೇ ಹತ್ತಿ ಕುಳಿತಿದ್ದಾನೆ ಎಂಬಂತೆ ಹಾಸ್ಯಾಸ್ಪದವಾದೀತು. ಆದ್ದರಿಂದ ಆನಂದಮಯನೆಂದರೆ, ವಿಷಯ ಸುಖವೆಂಬ ಆನಂದವನ್ನು ಅನುಭವಿಸುವ ಜೀವಾತ್ಮನೆಂದರ್ಥ. ಈ ವಿಷಯಸುಖವನ್ನು ಭೋಗಿಸತಕ್ಕವನು ಆನಂದದ ವಿಕಾರ. ಈ ಜೀವಾತ್ಮನೇ ಆನಂದಮಯಕೋಶ. ಅಥವಾ ಪರಿಶುದ್ಧ ವಿಷಯಜನ್ಯ ಆನಂದವೇ ಆನಂದಮಯಕೋಶ. (ಇನ್ನೂ ಅಧಿಕ ವಿಚಾರಗಳಿಗೆ ಆನಂದಮಯಾಧಿಕರಣದ ಭಾಷ್ಯವನ್ನು ನೋಡಬಹುದು (ಬ್ರ. ಸೂ. ೧-೧-೧೨ರಿಂದ ೧೯ರ ವರೆಗೆ). ಈ ವಿಷಯಾನಂದದ ಒಳಭೇದಗಳು ಈತನ ಅವಯವಗಳು.

ಇಷ್ಟವಸ್ತುವಿನಿಂದ ಜನ್ಯಸುಖವು ಪ್ರಿಯ. ಈ ಪ್ರಿಯವು ಆನಂದಮಯನ ಶಿರಸ್ಸು ಇದ್ದಹಾಗೆ. ಇಷ್ಟವಸ್ತು ದೊರೆಯಿತೆಂದು ಆಗುವ ಸುಖವೇ ಮೋದ. ಅಧಿಕವಾದ ಮೋದವೇ ಪ್ರಮೋದ. ಪ್ರಿಯಾದಿಸುಖವಿಶೇಷಗಳಲ್ಲಿರುವ ಸುಖಸಾಮಾನ್ಯವು ಪ್ರಕೃತದಲ್ಲಿ ಆನಂದ. ಇದು ಸುಖವಿಶೇಷಗಳ ಆತ್ಮ.

'ವಿಜ್ಞಾನಂ ಯಜ್ಞಂ ತನುತೇ' ಎಂಬಲ್ಲಿ ಹೇಳಿದ ವಿಜ್ಞಾನವೆಂದರೆ ಸಾತ್ತ್ವಿಕವಾದ ಪರಿಶುದ್ಧವಾದ ಜ್ಞಾನ. ಇದರಿಂದ ಪ್ರಾಪ್ತವಾಗುವ ಶಾಸ್ತ್ರೀಯ ವಿಷಯಭೋಗದಿಂದಲೂ ಶುಭಕರ್ಮಗಳಿಂದಲೂ ಪ್ರಾಪ್ತವಾದ ಸಾತ್ತ್ವಿಕ ಸುಖವನ್ನು ಇಲ್ಲಿ ಆನಂದವೆಂದು ತಿಳಿಯಬೇಕು. ದುಷ್ಕರ್ಮದಿಂದ ಒದಗಬಹುದಾದ ಜಘನ್ಯಸುಖವನ್ನು ಇಲ್ಲಿ ಗ್ರಹಿಸಬಾರದು. ಅದು ತಾಮಸವಾದ ವಿಷಯಸುಖ. ಸುಖವೆಂಬ ಭ್ರಮೆಗೆ ಒಳಗಾದದ್ದು. ವಿಜ್ಞಾನಮಯನಿಗೆ ಸ್ವಪ್ನದಲ್ಲಿ ಆನಂದಮಯನು ಉಪಲಬ್ಧನಾಗುತ್ತಾನೆ. ಜಗತ್ತಿನಲ್ಲಿ ವಿಜ್ಞಾನಮಯನು ಕರ್ತೃವಾಗಿರುವುದರಿಂದ ಸ್ವಲ್ಪ ದುಃಖದ ಸಂಬಂಧವಿರುತ್ತದೆ. ಸ್ವಪ್ನದ ಆನಂದದಲ್ಲಿ ದುಃಖದ ಸಂಬಂಧವಿರುವುದಿಲ್ಲ. ಆಗ ಕೇವಲ ಆನಂದಮಯನಾಗುತ್ತಾನೆ.

ಶುಭಕರ್ಮಜನ್ಯವಾದ ಪ್ರಿಯಹರ್ಷಪ್ರಮೋದಗಳು ನಮ್ಮ ಮನೋವೃತ್ತಿಯಾದ ಜ್ಞಾನಕ್ಕೆ ಗೋಚರವಾಗತಕ್ಕವು. ಆದ್ದರಿಂದ ಇವು ವೃತ್ತ್ಯುಪಹಿತ ಸುಖಗಳೆನಿಸುತ್ತವೆ. ಆನಂದ ಆತ್ಮಾ ಎಂಬಲ್ಲಿ ಹೇಳಿದ ಆನಂದವು ವೃತ್ತಿಯಿಂದ ಉಪಹಿತವಲ್ಲ. ಅದೇ ಪರಬ್ರಹ್ಮ. ಲೋಕದಲ್ಲಿ ಜನರು ಅನುಭವಿಸುವ ಪ್ರಿಯಾದಿಸುಖಗಳು ಕ್ಷಣಿಕವಾದವು. ಏಕೆಂದರೆ, ಅವು ಕರ್ಮಜನ್ಯವಾದವು. ತಪಸ್ಸು, ಜ್ಞಾನ, ಬ್ರಹ್ಮಚರ್ಯ, ಶ್ರದ್ಧೆ ಮುಂತಾದ್ದರಿಂದ ಅಂತಃಕರಣವು ನಿರ್ಮಲವಾಗುತ್ತ ಹೋದಂತೆ, ಮುಮುಕ್ಷುವಿನ ಅಂತಃಕರಣದಲ್ಲಿ, ಅವನು ಏಕಾಂತದಲ್ಲಿ ಸುಮ್ಮನಿದ್ದಾಗಲೂ ಆನಂದವು ತಾನಾಗಿ ಪ್ರಕಾಶಿಸುತ್ತ ಉತ್ಕರ್ಷವನ್ನು ಹೊಂದುತ್ತ ಹೋಗುವುದು. ಮುಂದೆ 'ರಸೋ ವೈ ಸಃ, ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತೀ' ಎಂದು ಉಪನಿಷತ್ತೇ ಹೇಳುತ್ತದೆ. "ಆ ಪರಮಾತ್ಮನೇ ರಸ. ಈ ಸಾಧಕನು ರಸವನ್ನು ಪಡೆದಾಗಲೇ ಆನಂದವುಳ್ಳವನಾಗುತ್ತಾನೆ" ಎಂದು ಅದರ ಅಭಿಪ್ರಾಯ. ಈ ಪ್ರಕರಣದಲ್ಲಿರುವ ಶ್ರೀಶಂಕರ ಭಾಷ್ಯವನ್ನು ಓದಿದಾಗ, ಆಲಂಕಾರಿಕರು ಕಾವ್ಯರಸವನ್ನು ವರ್ಣಿಸುತ್ತ 'ರಸೋ ವೈ ಸಃ' ಎಂದು ಉದಾಹರಿಸುವುದು ತೀರ ಅತಿಶಯೋಕ್ತಿ-ಯೇನಲ್ಲವೆನಿಸುತ್ತದೆ. ಸಹೃದಯನಿಗೆ ಕಾವ್ಯಾನಂದದಲ್ಲಿ ಧನಾದಿವಸ್ತುಲಾಭವೇನೂ ಇರುವುದಿಲ್ಲ. ಹಾಗೆಯೇ "ಏತಸ್ಯೈವ ಆನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ" ಎಂದೂ ಶ್ರುತಿಯು ಹೇಳುತ್ತದೆ. "ಈ ಆನಂದಸ್ವರೂಪವಾದ ಬ್ರಹ್ಮದ ಒಂದು ಅಣುವಿನಷ್ಟು ಆನಂದವನ್ನು ಇತರ ಜೀವಿಗಳು ಪಡೆದು ಸುಖಿಸುತ್ತವೆ" ಎಂದು ಅದರ ತಾತ್ಪರ್ಯ.

ಅನ್ನಮಯಕೋಶದಿಂದ ಅಂತರತಮವಾಗುತ್ತ ಉತ್ಕರ್ಷವನ್ನು

ಪಡೆದಿರುವ ಐದನೆಯ ಆನಂದಮಯ ಕೋಶಕ್ಕೆ ಆತ್ಮವಾಗಿ, ಉಳಿದ ಕೋಶಗಳಿಗೆ ಒಂದೊಂದು ಆತ್ಮವನ್ನು ಅರ್ಪಿಸುತ್ತ ಪರಮ ಪ್ರಕರ್ಷವನ್ನು ಪಡೆದ ಬ್ರಹ್ಮವು ಆನಂದಸ್ವರೂಪವಾಗಿದೆ. ಅವಿದ್ಯಾಕಲ್ಪಿತವಾದ ಸಮಸ್ತದ್ವೈತಕ್ಕೂ ಇದು ಅವಸಾನಭೂಮಿ. ಈ ಪರಬ್ರಹ್ಮವೇ ಅವಿದ್ಯಾಕಲ್ಪಿತ ಸಮಸ್ತದ್ವೈತಕ್ಕೆ ಆಧಾರಭೂಮಿಯೂ ಆಗಿದೆ.

## ಷಷ್ಠಾನುವಾಕ

**ಅಸನ್ನೇವ ಸ ಭವತಿ । ಅಸದ್‌ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ವೇದ । ಸಂತಮೇನಂ ತತೋವಿದುರಿತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ಅಥಾತೋಽನು ಪ್ರಶ್ನಾಃ । ಉತಾವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚನ ಗಚ್ಛತೀ೩ । ಆಹೋ ವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚಿತ್ ಸಮಶ್ನುತಾ ೩ ಉ । ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್‌ಂ ಸರ್ವಮಸೃಜತ । ಯದಿದಂ ಕಿಂ ಚ । ತತ್‌ಸೃಷ್ಟ್ವಾ । ತದೇವಾನು ಪ್ರಾವಿಶತ್ । ತದನುಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂಚ । ತತ್ ಸತ್ಯಮಿತ್ಯಾಚಕ್ಷತೇ । ತದಪ್ಯೇಷ ಶ್ಲೋಕೋ ಭವತಿ ॥೧॥**

ಬ್ರಹ್ಮವು ಅಸತ್-ಇಲ್ಲ ಎಂದು ಹೇಳತಕ್ಕವನು ತಾನೇ ಅಸತ್ ಆಗಿ ಬಿಡುತ್ತಾನೆ! ಬ್ರಹ್ಮವೇ ತಾನಾಗಿರುವಾಗ ಬ್ರಹ್ಮವಿಲ್ಲ ಎಂದರೆ ತಾನೇ ಇಲ್ಲ ಎಂದು ಹೇಳಿದಂತೆ. ಅಸತ್‌ಪುರುಷನಿಗೆ ಸಮನಾಗುತ್ತಾನೆ ಎಂದು ಅಭಿಪ್ರಾಯ. ಅವನಿಗೆ ಪರಮಪುರುಷಾರ್ಥವಾದ ಮೋಕ್ಷವೇ ಇಲ್ಲವಾಗುತ್ತದೆ. ಯಾವನು 'ಅಸ್ತಿ ಬ್ರಹ್ಮ' ಬ್ರಹ್ಮವಿದೆ, ಬ್ರಹ್ಮವು ಸತ್ ಎಂದು ಹೇಳುತ್ತಾನೋ ಸದ್ವಸ್ತುವಿಗಿಂತ ಇನ್ನೊಂದು ಇಲ್ಲವಾದ್ದರಿಂದ ಆತನೇ ಸತ್-ಬ್ರಹ್ಮ ಎಂದೂ ಬ್ರಹ್ಮವಿದರು ಹೇಳುತ್ತಾರೆ.

---

ಟಿಪ್ಪಣಿ : ಗಚ್ಛತೀ೩ = ಇಲ್ಲಿ ಇ ಕಾರಕ್ಕೆ ಮೂರು ಮಾತ್ರೆಗಳ ಪ್ಲುತ ಬಂದಿದೆ. ಸಮಶ್ನುತಾ ೩ ಉ = ಸಮಶ್ನುತೇ ಉ - ಎಂದಿರುವಾಗ ಏಕಾರಕ್ಕೆ ಅಯಾದೇಶ ಬಂದು ಯಕಾರವು ಲುಪ್ತವಾಗಿದೆ. ಸಮಶ್ನುತ ಉ ಎಂದಿರುವಾಗ ಅಕಾರಕ್ಕೆ ಪ್ಲುತ ಬಂದಿದೆ. ಉ ಎಂಬ ನಿಪಾತವು ಪ್ರಶ್ನಾರ್ಥಕ. 'ವಿಚಾರ್ಯಮಾಣಾನಾಂ' (8-2-92) ಎಂಬ ಪಾಣಿನಿ ಸೂತ್ರದಿಂದ ಎರಡು ವಾಕ್ಯಗಳಲ್ಲಿಯೂ ಪ್ಲುತ ಬಂದಿದೆ.

ನಾಸ್ತಿಕನನ್ನು ಈ ಕಾಲದಲ್ಲಿಯೂ ಜನರು ಗೌರವಿಸುವುದಿಲ್ಲ. ಆತನಿಗೆ ಪಾಪದ ಭೀತಿ ಇಲ್ಲವೆಂದೇ ಹೇಳಬೇಕಾಗುತ್ತದೆ. ದೇವರಿಲ್ಲವೆನ್ನತಕ್ಕವನಿಗೆ ಪುನರ್ಜನ್ಮದಲ್ಲಿಯೂ ನಂಬಿಕೆ ಇರುವುದಿಲ್ಲ. ಅವನು ಪಾಪಕಾರ್ಯಕ್ಕೆ ಏಕೆ ಅಂಜಬೇಕು? ಅಂಥವರು ಸಮಾಜಕ್ಕೆ ಮತ್ತು ಸರ್ಕಾರಕ್ಕೆ ಮಾತ್ರ ಅಂಜಿ ಪಾಪಕಾರ್ಯದಲ್ಲಿ ತೊಡಗುವುದಿಲ್ಲ ಎನ್ನಬೇಕಾಗುತ್ತದೆ. ದೇವರನ್ನು ನಂಬಿದವರೂ ಪಾಪಕಾರ್ಯವನ್ನು ಮಾಡುತ್ತಾರೆ. ರಜಸ್ತಮೋಗುಣಗಳ ಉದ್ರೇಕದ ಪರಿಣಾಮ ಅದು.

ವಿಜ್ಞಾನಮಯನಿಗೆ ಆನಂದಮಯನು ಆತ್ಮ. ಆನಂದಮಯನೇ ಇಲ್ಲವೆಂದು ನಾಸ್ತಿಕನೂ ಶಂಕಿಸುವುದಿಲ್ಲ. ಆದರೆ ಸರ್ವವ್ಯವಹಾರಗಳಿಗೂ ನಿಲುಕದ ನಿರಂಜನ ನಿರ್ವಿಶೇಷ ಬ್ರಹ್ಮದ ವಿಷಯದಲ್ಲಿ ಮಾತ್ರ ಜನರಿಗೆ 'ನಾಸ್ತಿ' ಎಂಬ ಭಾವನೆ ಹುಟ್ಟುವುದು ಸಹಜ. ಅದು ಅವಿದ್ಯೆಯ ಫಲ.

ಬ್ರಹ್ಮವಿದಾಪ್ನೋತಿ ಪರಂ–ಬ್ರಹ್ಮವಿದನು ಪರಬ್ರಹ್ಮವನ್ನು ಪಡೆಯುತ್ತಾನೆ ಎಂದು ಹೇಳಿದೆಯಷ್ಟೆ. ಪರಬ್ರಹ್ಮವು ಜ್ಞಾನಿಗೂ ಅಜ್ಞಾನಿಗೂ ಸಮಾನವಾದದ್ದು. ಇಬ್ಬರೂ ವಾಸ್ತವವಾಗಿ ಬ್ರಹ್ಮಸ್ವರೂಪರೇ. ಆಸ್ತಿಕ–ನಾಸ್ತಿಕರೀರ್ವರಿಗೂ ಸಹ ಬ್ರಹ್ಮವು ಸಮಾನ. ಹೀಗಿರುವಾಗ ಆಸ್ತಿಕನಾದ ಬ್ರಹ್ಮವಿದನು ಮಾತ್ರ ಬ್ರಹ್ಮವನ್ನು ಪಡೆಯುತ್ತಾನೆ, ಉಳಿದವರು ಪಡೆಯುವುದಿಲ್ಲ ಎನ್ನಲು ಕಾರಣವೇನು? ಶರೀರವು ಬಿದ್ದು ಹೋದಮೇಲೆ, ಕೋಶಪಂಚಕಗಳೂ ನಷ್ಟವಾಗಲು, ಉಳಿಯುವ ಆತ್ಮ ಎಲ್ಲರಿಗೂ ಒಬ್ಬನೇ ಸರಿಯಷ್ಟೆ? – ಎಂಬ ಶಂಕೆಯಿಂದ ಶಿಷ್ಯನು ಆಚಾರ್ಯನಿಗೆ ಈ ಪ್ರಶ್ನೆಗಳನ್ನು ಹಾಕುತ್ತಾನೆ. –

೧. ಜ್ಞಾನಿಯಲ್ಲದವನು ಸತ್ತಮೇಲೆ ಪರಬ್ರಹ್ಮವನ್ನು ಸೇರಿಕೊಳ್ಳುತ್ತಾನೊ?

೨. ಅಥವಾ ಜ್ಞಾನಿಯಲ್ಲದವನು ಸೇರಿಕೊಳ್ಳುವುದಿಲ್ಲವೊ?

೩. ಜ್ಞಾನಿಯಾದವನು ಮಾತ್ರ ಬ್ರಹ್ಮವನ್ನು ಸೇರಿಕೊಳ್ಳುತ್ತಾನೆ ಎಂದು ನಿಯಮಿಸಲು ಕಾರಣವಾದರೂ ಯಾವುದು?

ಬ್ರಹ್ಮವು ಅಸ್ತಿ ಎಂದು ಸಿದ್ಧವಾದಾಗ ಈ ಪ್ರಶ್ನೆಗಳು ಹುಟ್ಟುತ್ತವೆ. ಆದ್ದರಿಂದ ಬ್ರಹ್ಮವು ಅಸ್ತಿ ಎಂಬುದನ್ನೀಗ ಸಿದ್ಧಿಸಬೇಕು. ಹೇಗೆಂದರೆ – 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯು ಬ್ರಹ್ಮವನ್ನು ಸತ್ಯ ಎಂದು ಹೇಳಿದೆ. ಯಾವುದು ಕಾಲತ್ರಯದಲ್ಲಿಯೂ ನಿರ್ಬಾಧವಾಗಿ ಸತ್ ಆಗಿದೆಯೋ ಅದು ಸತ್ಯ. ಆದ್ದರಿಂದ ಬ್ರಹ್ಮವು ಸತ್ಯ–ಸತ್. ಅದು ಅಸ್ತಿ.

ಶಂಕೆ – ನೀವು ಹೇಳುವ ಬ್ರಹ್ಮವು ಅಸತ್–ಇಲ್ಲ ಎಂದು ನಾವು

ಹೇಳುತ್ತೇವೆ. ಯಾವುದು ಇದೆಯೋ ಆ ವಸ್ತು ಶ್ರೋತ್ರವೇ ಮೊದಲಾದ ಯಾವುದಾದರೊಂದು ಇಂದ್ರಿಯಕ್ಕೆ ಗೋಚರವಾಗಲೇಬೇಕು. ಬ್ರಹ್ಮವು ಯಾವ ಇಂದ್ರಿಯದಿಂದಲೂ ಗೃಹೀತವಾಗುವುದಿಲ್ಲ. ಬ್ರಹ್ಮವೆಂಬ ಒಂದು ವಸ್ತುವಿದ್ದಿದ್ದರೆ ಶಬ್ದ ಸ್ಪರ್ಶಾದಿ ಗುಣಗಳಲ್ಲೊಂದಾದರೂ ಅನುಭವಕ್ಕೆ ಬರುತ್ತಿತ್ತು. ಯಾವ ಇಂದ್ರಿಯಕ್ಕೂ ಪ್ರತ್ಯಕ್ಷವಲ್ಲವಾದ್ದರಿಂದ ಬ್ರಹ್ಮವೆಂಬುದು ಇಲ್ಲ. ಅದು ಅಸತ್.

ಉತ್ತರ – ಒಂದು ಪದಾರ್ಥವಿದೆಯೆಂಬುದನ್ನು ನಿಶ್ಚಯಿಸಲು ಪ್ರತ್ಯಕ್ಷ ಒಂದೇ ಪ್ರಮಾಣವಲ್ಲ. ಅನುಮಾನವೂ ಒಂದು ಪ್ರಮಾಣ. ದೂರದಲ್ಲಿ ಹೊಗೆಯನ್ನು ನೋಡಿದಾಗ ಅಲ್ಲಿ ಬೆಂಕಿ ಇದೆಯೆಂದು ನಿಶ್ಚಯಿಸಬಹುದು. ಗೋಡೆಯ ಆಚೆಗೆ ಮಾತಾಡುವ ಶಬ್ದವನ್ನು ಕೇಳಿದಾಗ ಅಲ್ಲಿ ಜನರಿದ್ದಾರೆಂದು ಹೇಳಬಹುದು. ಮಾವಿನಮರವನ್ನು ನೋಡಿದಾಗ ಅದಕ್ಕೊಂದು ಬೀಜವಿತ್ತೆಂದು ತಿಳಿಯಬಹುದು. ಒಟ್ಟಿನಲ್ಲಿ ಕಾರ್ಯವನ್ನು ನೋಡಿ ಅದಕ್ಕೊಂದು ಕಾರಣವಿರಬೇಕೆಂದು ಅನುಮಾನಪ್ರಮಾಣದಿಂದ ನಿರ್ಣಯಿಸಬಹುದು. ಆಕಾಶ, ವಾಯು, ಅಗ್ನಿ, ಸೂರ್ಯ, ನಕ್ಷತ್ರ, ಚಂದ್ರ ಮುಂತಾದವು ಕಾರ್ಯಗಳು. ಈ ಕಾರ್ಯಗಳಿಗೆ ಕಾರಣವಾದದ್ದು ಯಾವುದೋ ಅದೇ ಬ್ರಹ್ಮ. "ಇದಂ ಸರ್ವಮಸೃಜತ" ಎಂದು ಶ್ರುತಿಯೇ ಆಕಾಶಾದಿಗಳನ್ನು ಬ್ರಹ್ಮವು ಸೃಜಿಸಿತೆಂದು ಘೋಷಿಸಿದೆ. 'ಆತ್ಮನ ಆಕಾಶಃ ಸಂಭೂತಃ–ಇತ್ಯಾದಿ ವಾಕ್ಯಗಳು ಬ್ರಹ್ಮವಲ್ಲಿಯಲ್ಲಿಯೇ ಇವೆ. ಆದ್ದರಿಂದ ಈ ಜಗತ್ತಿಗೆ ಕಾರಣವಾದದ್ದು ಬ್ರಹ್ಮ. ಅದು ಸತ್.

ಶಂಕೆ – ಆಕಾಶಾದಿಗಳು ತಾವಾಗಿಯೇ ಹುಟ್ಟಿವೆಯೆಂದೇಕೆ ಹೇಳಬಾರದು?

ಉತ್ತರ – ಹಾಗಲ್ಲ; ಅಸತ್ ಎಂದರೆ ಶೂನ್ಯ ಎಂದರ್ಥ. ಶೂನ್ಯದಿಂದ ಯಾವ ವಸ್ತುವೂ ಹುಟ್ಟುವುದಿಲ್ಲ. ಶೂನ್ಯದಿಂದ ಹುಟ್ಟಿದರೆ ಶೂನ್ಯವೇ ಆದೀತು. ಆಗ ಇಂದ್ರಿಯಗಳಿಗೆ ಗೋಚರವಾಗದೇ ಹೋಗುತ್ತದೆ. ಜಗತ್ತು ಇಂದ್ರಿಯ ಗೋಚರವಾಗಿದೆ. 'ಕಥಮಸತಃ ಸಜ್ಜಾಯೇತ' ಎಂದು ಶ್ರುತಿಯೇ ಅಸತ್ತಿನಿಂದ ಜಗತ್ತು ಹುಟ್ಟುವುದಿಲ್ಲವೆಂದು ನಿಂದಿಸಿದೆ. ಆದ್ದರಿಂದ ಬ್ರಹ್ಮವು ಸತ್–ಅಸ್ತಿ ಎಂದು ನಿರ್ಣಯಿಸಬಹುದು.

ಶಂಕೆ – ಗಡಿಗೆಗೆ ಮಣ್ಣಿನಂತೆ, ಗಿಡಕ್ಕೆ ಬೀಜದಂತೆ ಬ್ರಹ್ಮವು ಜಗತ್ತಿಗೆ ಕಾರಣವಾದರೆ, ಮಣ್ಣು ಬೀಜಗಳಂತೆ ಬ್ರಹ್ಮವೂ ಒಂದು ಜಡವಸ್ತುವಾಗಿ ಬಿಡುತ್ತದೆಯಲ್ಲವೆ?

ಉತ್ತರ – ಇಲ್ಲ; 'ಸೋಽಕಾಮಯತ' ಎಂಬ ಶ್ರುತಿಯು ಪರಮಾತ್ಮನಲ್ಲಿ

ಜಗತ್ತನ್ನು ಸೃಜಿಸಬೇಕೆಂಬ ಬಯಕೆ ಉಂಟಾಯಿತು ಎಂದು ಹೇಳಿದೆ. ಜಡವಸ್ತುವಿನಲ್ಲಿ ಬಯಕೆ ಹುಟ್ಟುವುದಿಲ್ಲ. ಆದ್ದರಿಂದ ಪರಮಾತ್ಮನು ಚೇತನ, ಜಡನಲ್ಲ.

ಶಂಕೆ – ಪರಮಾತ್ಮನು ಆಪ್ತಕಾಮನೆಂದೂ ಅವನಿಗೆ ಬೇಕಾದದ್ದು ಯಾವುದೂ ಇಲ್ಲವೆಂದು ಹೇಳುತ್ತೀರಿ. ಈಗ 'ಬಯಕೆ ಉಂಟಾಯಿತು' ಎಂದು ಹೇಳುವುದು ವಿರುದ್ಧವಾಗುತ್ತದೆ. ಮತ್ತು ಅವನು ಆಪ್ತಕಾಮನಲ್ಲವೆಂದೂ ಸಿದ್ಧವಾಗುತ್ತದೆಯಲ್ಲವೆ?

ಉತ್ತರ – ಹಾಗಲ್ಲ; ಅವನ ಕಾಮನೆಗಳು ಸ್ವತಂತ್ರವಾದವು. ತನಗಾಗಿ ಆತನು ಯಾವುದನ್ನೂ ಬಯಸುವುದಿಲ್ಲ. ಜೀವಿಗಳ ಕರ್ಮಗಳಿಗೆ ಅನುಸಾರವಾಗಿ ಜೀವಿಗಳು ಸುಖದುಃಖಾದಿಗಳನ್ನು ಭೋಗಿಸಬೇಕಾದ್ದರಿಂದ ಪರಮಾತ್ಮನು ಸ್ವಾತಂತ್ರ್ಯದಿಂದ ಇಷ್ಟಾನುಸಾರವಾಗಿ ಜಗತ್ತನ್ನು ಸೃಜಿಸುತ್ತಾನೆ. ಅವನಿಗೆ ಸ್ವತಃ ಕಾಮನೆಗಳೇನೂ ಇಲ್ಲವಾದ್ದರಿಂದ ಆತನು ಆಪ್ತಕಾಮನೇ ಹೌದು. ಮನುಷ್ಯರು ತಮಗಿಂತ ಭಿನ್ನವಾದ ವಸ್ತುಗಳನ್ನು ಭೋಗಕ್ಕಾಗಿ ಬಯಸುತ್ತಾರೆ. ಪರಮಾತ್ಮನಿಗೆ ಭಿನ್ನವಾದ ವಸ್ತುಗಳೇ ಇಲ್ಲದಿರುವಾಗ ಯಾವ ಭೋಗಕ್ಕಾಗಿ ಯಾವ ವಸ್ತುವನ್ನು ಬಯಸುತ್ತಾನೆ?

ಪರಮಾತ್ಮನು ಬಯಸಿದ್ದಾದರೂ ಏನು? 'ಬಹು ಸ್ಯಾಂ ಪ್ರಜಾಯೇಯೇತಿ' – ನಾನು ಬಹುವಾಗಬೇಕು, ನಾನು ಉತ್ಪನ್ನನಾಗಬೇಕು– ಎಂದು ಬಯಸಿದನು. ತಾನು ಒಬ್ಬನೇ ಇರುವಾಗ ಬಹುವಾಗುವುದು ಹೇಗೆ? ತಂದೆಯು ಪುತ್ರನನ್ನು ಉತ್ಪಾದಿಸಿ ಬಹುವಾಗುವಂತೆಯೆ? ಅಲ್ಲ. ತನ್ನಲ್ಲಿ ಅನಭಿವ್ಯಕ್ತವಾಗಿರುವ ನಾಮರೂಪಗಳನ್ನು ಅಭಿವ್ಯಕ್ತಿಗೊಳಿಸುವುದರ ಮೂಲಕ ಬಹುವಾಗುವುದು. ಇದೇ ಬಹುಭವನ. ತಾನು ಇದ್ದೇ ಇರುವಾಗ ಮತ್ತೆ ಉತ್ಪನ್ನವಾಗುವುದು ಎಂದರೇನು? ಬಹುಭವನದಿಂದ ಅಭಿವ್ಯಕ್ತ ನಾಮರೂಪಗಳಲ್ಲಿ ಅನುಪ್ರವೇಶಮಾಡುವುದೇ ಉತ್ಪನ್ನನಾಗುವುದು.

ಅವಯವರಹಿತವಾದ ಬ್ರಹ್ಮವು ಬಹುವಾಗುವುದೆಂದರೆ, ಬ್ರಹ್ಮದಲ್ಲಿಯೇ ನಾಮರೂಪಗಳು ತೋರಿಕೊಳ್ಳುವುದು. ಶಬ್ದ ಸ್ಪರ್ಶಾದಿ ತನ್ಮಾತ್ರಾವಸ್ಥೆ, ಸ್ಥೂಲಭೂತಾವಸ್ಥೆ – ಇವೆಲ್ಲವೂ ತೋರಿಕೊಳ್ಳುವ ವಸ್ತುಗಳ ಅವಸ್ಥಾಭೇದವೇ ಹೊರತು ಬ್ರಹ್ಮದ ಪರಿಣಾಮವೂ ಅಲ್ಲ; ಅದರ ವಿಕಾರವೂ ಅಲ್ಲ. ಬ್ರಹ್ಮಕ್ಕಿಂತ ಬೇರೆಯಾದ ಇನ್ನೊಂದು ವಸ್ತು ಯಾವ ಕಾಲದಲ್ಲಿಯೂ ಇಲ್ಲ. ಬ್ರಹ್ಮವು ಜಗದ್ರೂಪವಲ್ಲ. ಜಗತ್ತಿಲ್ಲದೆಯೇ ಬ್ರಹ್ಮವಿರುತ್ತದೆ. ಜಗತ್ತು ಬ್ರಹ್ಮಸ್ವರೂಪ. ಬ್ರಹ್ಮವಿಲ್ಲದೆ ಜಗತ್ತು ಇರುವುದಿಲ್ಲ.

**ಸ ತಪೋಽತಪ್ಯತ** = ತಪಸ್ಸೆಂದರೆ ಇಲ್ಲಿ ಜ್ಞಾನ. 'ಯಸ್ಯ ಜ್ಞಾನಮಯಂ ತಪಃ' ಎಂದು ಶ್ರುತಿಯೇ ಹೇಳಿದೆ. ಕಾಯಕ್ಲೇಶಾದಿರೂಪ ತಪಸ್ಸಿನ ಸಂಭವವೂ ಸಹ ಆತ್ಮನಿಗಿಲ್ಲ. ಜಗದ್ರಚನೆ ಹೇಗಿರಬೇಕೆಂದು ಈಶ್ವರನು ಆಲೋಚಿಸಿದನು– ಎಂದು ಈ ವಾಕ್ಯದ ಅರ್ಥ. ಹಾಗೆ ಆಲೋಚಿಸಿ ನಮಗೆ ದೃಶ್ಯಮಾನವಾದ ಈ ಜಗತ್ತನ್ನು ನಿರ್ಮಿಸಿದನು.

**ತತ್ಸೃಷ್ಟ್ವಾ ತದೇವಾನು ಪ್ರಾವಿಶತ್** = ಮಾಯಾವಿಯಾದ ಈಶ್ವರನು ತನ್ನ ಮಾಯೆಯಿಂದ ಈ ಜಗತ್ತನ್ನು ಸೃಜಿಸಿ ಇದರೊಳಗೆ ಅನುಪ್ರವೇಶ ಮಾಡಿದನು. ಇಲ್ಲಿ ವಿಮರ್ಶಿಸಬೇಕಾದ ವಿಷಯವಿದೆ.

ಈ ಜಗತ್ತನ್ನು ಸೃಜಿಸಿದ ಈಶ್ವರನು ತಾನೇ ಅನುಪ್ರವೇಶ ಮಾಡಿದನೆ? ಅಥವಾ ತನ್ನ ವಿಕಾರವಾದ ರೂಪಾಂತರದಿಂದ ಅನುಪ್ರವೇಶಮಾಡಿದನೆ? ಯಾವುದು ಸರಿ? ಇಲ್ಲಿ ಸೃಷ್ಟಿಕ್ರಿಯೆ, ಅನುಪ್ರವೇಶ ಕ್ರಿಯೆ ಎಂಬ ಎರಡು ಕ್ರಿಯೆಗಳಿವೆ. ಯಾವನು ಸೃಷ್ಟಿಮಾಡಿದನೋ ಅವನೇ ಅನುಪ್ರವೇಶ ಮಾಡಿದನೆಂಬುದೇ ಸರಿ. 'ಸಮಾನಕರ್ತೃಕಯೋಃ ಪೂರ್ವಕಾಲೇ' (೩–೪–೨೧) ಎಂಬ ಪಾಣಿನಿಸೂತ್ರದಿಂದ ಸೃಷ್ಟ್ವಾ ಎಂಬಲ್ಲಿ ಕ್ತ್ವಾ ಪ್ರತ್ಯಯ ಬಂದಿದೆ. ಆದ್ದರಿಂದ ಎರಡು ಕ್ರಿಯೆಗಳಿಗೂ ಒಬ್ಬನೇ ಕರ್ತೃವೆಂಬುದೇ ಸರಿ.

ಆದರೆ ಕಾರಣವು ಕಾರ್ಯದಲ್ಲಿ ಸೇರಿಕೊಂಡೇ ಕಾರ್ಯವನ್ನು ಉತ್ಪಾದಿಸುತ್ತದೆ. ಕಾರಣವಾದ ಮಣ್ಣು ಕಾರ್ಯವಾದ ಗಡಿಗೆಯಲ್ಲಿ ಸೇರಿಕೊಂಡೇ ಇರುತ್ತದೆ. ನೂಲು ಬಟ್ಟೆಯಲ್ಲಿ ಸೇರಿಕೊಂಡೇ ಬಟ್ಟೆಯಾಗುತ್ತದೆ. ಗಡಿಗೆಯನ್ನು ನಿರ್ಮಿಸಿ ಆಮೇಲೆ ಮಣ್ಣು ಅದರಲ್ಲಿ ಹೋಗಿ ಸೇರಿಕೊಳ್ಳುತ್ತದೆ ಎನ್ನುವುದು ಅಸಂಗತ. ಹಾಗೆಯೇ ಈಶ್ವರನು ಮಾಯೆಯಿಂದ ಮಹತ್ತತ್ತ್ವಾದಿರೂಪದಲ್ಲಿ ಕಾರಣನೂ ಕಾರ್ಯನೂ ಆಗಿದ್ದಾನೆ. ಹೊಸದಾಗಿ ಅನುಪ್ರವೇಶವಾಗುವುದು ಹೇಗೆ?

ಹೇಗೆಂದರೆ, ಅನ್ಯರೂಪದಿಂದ ಅನುಪ್ರವೇಶವಾಗಬಹುದು. ಮಣ್ಣು ಪುಡಿಯರೂಪದಿಂದ ಗಡಿಗೆಯೊಳಗೆ, ನೂಲು ಹತ್ತಿಯರೂಪದಿಂದ ಬಟ್ಟೆಯೊಳಗೆ ಸೇರಿಕೊಳ್ಳುವುದಷ್ಟೆ? ಹಾಗೆಯೇ ಇಲ್ಲಿಯೂ ಆಗುತ್ತದೆ. 'ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'(ಛಾಂ. ೬–೩–೨) ಎಂದು ಛಾಂದೋಗ್ಯದಲ್ಲಿ ಹೇಳಿದೆ. ಜೀವಾತ್ಮನ ಅನುಪ್ರವೇಶವಾಯಿತೆಂದು ಹೇಳಬಹುದಲ್ಲವೆ? ಇಲ್ಲ; ಹೇಳಲಾಗದು. ಜಗತ್ತನ್ನೇ ಸೃಜಿಸಿದ ಈಶ್ವರನಿಗಿಂತ ಜೀವಾತ್ಮನು ಅನ್ಯನೇ ಅಲ್ಲ. ಮಣ್ಣು ಸಾವಯವವಾದದ್ದು. ಅದರ ಅವಯವವಾದ ಪುಡಿ ಗಡಿಗೆಯಲ್ಲಿ ಸೇರಿಕೊಂಡಿದೆ ಎನ್ನಬಹುದು. ಗಡಿಗೆಯೊಳಗೆ

ಸ್ಥಳವಿರುವುದರಿಂದ ಬೇರೆ ಮಣ್ಣನ್ನು ಗಡಿಗೆಯೊಳಗೆ ತುಂಬಬಹುದು. ಹತ್ತಿ-ಬಟ್ಟೆಗಳ ಕಥೆಯೂ ಅದೇ. ಬ್ರಹ್ಮವು ಅವಯವವಿಶಿಷ್ಟವಾದದ್ದಲ್ಲ. ಅದರೊಳಗೆ ಇನ್ನೊಂದು ಬಂದು ಸೇರಿಕೊಳ್ಳಲು ಇನ್ನೊಂದು ವಸ್ತುವೇ ಇಲ್ಲ.

ಶಂಕೆ – ಹಾಗಾದರೆ ಪ್ರವೇಶ ಹೇಗೆ ಸಾಧ್ಯ? 'ತದೇವಾನುಪ್ರಾವಿಶತ್' ಎಂದು ಶ್ರುತಿಯೇ ಹೇಳುವುದರಿಂದ ಪ್ರವೇಶವನ್ನು ಹೇಳಲೇಬೇಕಾಗಿದೆ. ಆದ್ದರಿಂದ ಬ್ರಹ್ಮವು ಅವಯವಸಹಿತವಾಗಿದೆಯೆಂದು ಹೇಳಬೇಕು. ಆಗ ತನ್ನ ಬಾಯಿಯಲ್ಲಿ ತನ್ನ ಅಂಗೈಯನ್ನು ಹೊಗಿಸುವಂತೆ, ನಾಮರೂಪಾತ್ಮಕವಾದ ಪ್ರಾಣಿದೇಹದಲ್ಲಿ ಜೀವರೂಪದಿಂದ ಪ್ರವೇಶವಾಯಿತು ಎನ್ನಬಹುದು.

ಉತ್ತರ – ಇಲ್ಲ; ಹಾಗೆ ಎನ್ನಲಾಗುವುದಿಲ್ಲ. ಬ್ರಹ್ಮವಿಲ್ಲದ ಶೂನ್ಯ ಸ್ಥಳವೇ ಇಲ್ಲ. ಬ್ರಹ್ಮವು ತನ್ನ ಮಾಯೆಯಿಂದ ನಾಮ ರೂಪಾತ್ಮಕವಾಗಿ ಪರಿಣಾಮ ಹೊಂದಿದಾಗ ಆತ್ಮವಿಲ್ಲದ ಸ್ಥಳ ಯಾವುದು? ಪ್ರವೇಶಮಾಡುವಾಗ ಖಾಲಿಯಾದ ಸ್ಥಳ ಇರಬೇಕಷ್ಟೆ? ಇದ್ದರೆ ಮಾತ್ರ ಜೀವರೂಪದಿಂದ ಪ್ರವೇಶಿಸಲು ಸಾಧ್ಯವಾದೀತು.

ಶಂಕೆ – ಹಾಗಾದರೆ ಹೀಗೆ ಹೇಳೋಣ. ಜೀವಾತ್ಮನು ಅಂತಃಕರಣದಿಂದ ಪರಿಚ್ಛಿನ್ನನಾದ್ದರಿಂದ ಜೀವಾತ್ಮನ ಸ್ಥಿತಿ ಅಲ್ಪ ಸ್ಥಳದಲ್ಲಿ. ಕಾರಣನಾದ ಪರಮಾತ್ಮನಿರುವುದು ಸರ್ವತ್ರ ವಿಶಾಲಸ್ಥಳದಲ್ಲಿ. ಅಂತಃಕರಣದಿಂದ ಪರಿಚ್ಛಿನ್ನನಾದವನು ವಿಶಾಲಸ್ಥಳದಲ್ಲಿರುವುದೇ ಪ್ರವೇಶ. ಘಟಾಕಾಶವು ಮಹಾಕಾಶವನ್ನು ಪ್ರವೇಶಿಸಿತು ಎಂಬಂತೆ ಹೇಳಬಹುದು.

ಉತ್ತರ – ಇಲ್ಲ, ಆಗ ಜೀವಸ್ವರೂಪವೇ ನಷ್ಟವಾಗಿಬಿಡುತ್ತದೆ. ಘಟಾಕಾಶವು ಮಹಾಕಾಶವನ್ನು ಸೇರಿಕೊಳ್ಳುವುದು ಘಟವು ಒಡೆದುಹೋದಾಗ. ಘಟವಿದ್ದಾಗ ಪ್ರವೇಶವನ್ನು ಹೇಳಲಾಗುವುದಿಲ್ಲ. ಜೀವವು ತನ್ನ ಕಾರಣವಾದ ಬ್ರಹ್ಮವನ್ನು ಪ್ರವೇಶಿಸಿತೆಂದರೆ ಜೀವಸ್ವರೂಪವೇ ಹೋಗಿ ಬ್ರಹ್ಮವಾಯಿತೆಂದು ಅರ್ಥವಾಗುತ್ತದೆ. ಇಲ್ಲಿ ಅದು ವಿವಕ್ಷಿತವಲ್ಲ. ಸೃಷ್ಟಿಕಾರ್ಯವನ್ನು ಹೇಳುವಾಗ ಮುಕ್ತಿಯ ವಿಚಾರವು ಹೇಗೆ ಬಂದೀತು? ಮತ್ತು 'ತದೇವಾನುಪ್ರಾವಿಶತ್' ಎಂಬ ಶ್ರುತಿಯು ಸೃಜಿಸಲ್ಪಟ್ಟ ಕಾರ್ಯವನ್ನು ಅನುಪ್ರವೇಶಿಸಿತು ಎಂದು ಹೇಳುತ್ತದೆ. ನೀವು ಹೇಳುವ ಪ್ರಕಾರ ಜೀವವು ಕಾರಣವಾದ ಬ್ರಹ್ಮವನ್ನು ಪ್ರವೇಶಿಸಿತು ಎಂದಾಗುತ್ತದೆ. ಹೀಗೆ ವಿರುದ್ಧವಾದ ಅರ್ಥವನ್ನು ಹೇಳುವುದು ಯುಕ್ತವಲ್ಲ.

ಶಂಕೆ – ಹಾಗಾದರೆ ಜೀವಾತ್ಮರೂಪವಾದ ಕಾರ್ಯವು ದೇಹರೂಪವಾದ ಕಾರ್ಯವನ್ನು ಪ್ರವೇಶಿಸಿ ದೇಹರೂಪವೇ ಆಯಿತು ಎನ್ನೋಣ. ಪ್ರಾಯೇಣ ಜನರು

ದೇಹವನ್ನೇ 'ನಾನು' ಎಂದು ತಿಳಿದಿರುವುದರಿಂದ ಈ ಅರ್ಥದಲ್ಲಿ ದೋಷವೇನು?

ಉತ್ತರ – ಇದು ವಿರುದ್ಧವಾಗುತ್ತದೆ. ಕಾರ್ಯವೇ ಇನ್ನೊಂದು ಕಾರ್ಯವಾಗುವುದಿಲ್ಲ. ಗಡಿಗೆಯು ಮತ್ತೊಂದು ಗಡಿಗೆಯಾಗುತ್ತದೆಯೆ?

ಶಂಕೆ – ಆಗುತ್ತದೆ. ಕಾರ್ಯವಾದ ಮಣ್ಣುಮುದ್ದೆಯು ಕಾರ್ಯವಾದ ಘಟವಾಗುತ್ತದೆ.

ಉತ್ತರ – ಹಾಗಲ್ಲ; ಜೀವಾತ್ಮನು ದೇಹವಾಗುತ್ತಾನೆ ಎನ್ನುವುದೇ ಅಸಂಗತ. ದೇಹವೇ ಜೀವಾತ್ಮನೆಂದು ತಿಳಿದವರು ಭ್ರಾಂತರು. ಭ್ರಮೆಯನ್ನು ಆಶ್ರಯಿಸಿ ಶ್ರುತಿಗೆ ಅರ್ಥಹೇಳಬಾರದು. ಅನ್ನ ಪ್ರಾಣಾದಿಗಳು ಆತ್ಮನಲ್ಲವೆಂದು ಪಂಚಕೋಶಗಳ ವರ್ಣನೆಯೇ ಸಾರಿಹೇಳಿದೆ. ಅನ್ನಮಯ ಕೋಶವೆಂದರೆ ದೇಹವೇ ಅಲ್ಲವೆ? ಜೀವಾತ್ಮನು ದೇಹವಾಗಿಬಿಟ್ಟರೆ, ಮೋಕ್ಷವು ಅಸಂಭವವಾಗಿಬಿಡುತ್ತದೆ.

ಶಂಕೆ – ಹಾಗಾದರೆ ಶರೀರದ ಹೊರಗೆ ಶರೀರಕ್ಕೆ ಆಧಾರವಾಗಿದ್ದ ಬ್ರಹ್ಮವು ಶರೀರದೊಳಗೆ ಆಧೇಯವಾಗಿ ಪರಿಣಮಿಸಿತೆಂದು ಹೇಳಬಹುದು.

ಉತ್ತರ – ಇಲ್ಲ; ಪ್ರವೇಶಿಸಿದನೆಂದು ಶ್ರುತಿಯು ಹೇಳಿದೆ, ಪರಿಣಮಿಸಿದನು ಎಂದು ಹೇಳಿಲ್ಲ; ಶರೀರದೊಳಗೆ ಇದ್ದವನೇ ಒಳಗೆ ಪ್ರವೇಶಿಸಿದನೆಂದು ಹೇಳುವುದು ಅಸಂಗತ.

ಶಂಕೆ – ಹಾಗಾದರೆ ಈ ಪ್ರಕಾರ ಹೇಳೋಣ–ಸೂರ್ಯನು ಪ್ರತಿಬಿಂಬರೂಪದಲ್ಲಿ ನೀರಿನೊಳಗೆ ಪ್ರವೇಶಿಸಿದನು–ಎಂದು ಹೇಳುವಂತೆ, ಆತ್ಮನು ಶರೀರದೊಳಗೆ ಪ್ರತಿಬಿಂಬರೂಪದಲ್ಲಿ ಪ್ರವೇಶಿಸಿದನು ಎಂದರೆ ಬಾಧೆಯೇನು?

ಉತ್ತರ – ಅದು ಯುಕ್ತವಲ್ಲ. ಸೂರ್ಯನು ಪರಿಚ್ಛಿನ್ನನೂ ಮೂರ್ತನೂ ಆಗಿರುವುದರಿಂದ ಪ್ರತಿಬಿಂಬವು ಸಂಭವಿಸುತ್ತದೆ. ಆತ್ಮನು ಅಪರಿಚ್ಛಿನ್ನನೂ ಅಮೂರ್ತನೂ ಆಗಿರುವುದರಿಂದ ಇನ್ನೊಂದರಲ್ಲಿ ಪ್ರತಿಬಿಂಬವು ಸಂಭವಿಸುವುದೇ ಇಲ್ಲ. ಮತ್ತು ಸೂರ್ಯನಿಗೆ ದೂರದಲ್ಲಿ ಜಲವಿರುವಂತೆ, ಸರ್ವವ್ಯಾಪಕನಾದ ಆತ್ಮನಿಗೆ ದೂರದಲ್ಲಿ ಜಲ, ಆದರ್ಶ ಮೊದಲಾದ ವಸ್ತುವಿನಂತೆ ಇನ್ನೊಂದು ವಸ್ತುವೂ ಇಲ್ಲ. ಆದ್ದರಿಂದ ಆತ್ಮನು ಪ್ರವೇಶಿಸುವುದೆಂದರೆ ಪ್ರತಿಬಿಂಬಿಸುವುದು ಎಂದು ಅರ್ಥಹೇಳುವುದು ಸುತರಾಂ ಅಸಂಗತವಾಗುತ್ತದೆ.

ಶಂಕೆ – ಹಾಗಾದರೆ ಗತ್ಯಂತರವಿಲ್ಲ. 'ತದೇವಾನುಪ್ರಾವಿಶತ್' ಎಂಬ ವಾಕ್ಯವು ಅರ್ಥಶೂನ್ಯವೆಂದು ಹೇಳಬೇಕಾಯಿತು.

ಉತ್ತರ – ಎಲ್ಲಾದರೂ ಉಂಟೆ? ಅತೀಂದ್ರಿಯ ವಿಷಯದಲ್ಲಿ ಸರಿಯಾದ ಜ್ಞಾನವನ್ನುಂಟುಮಾಡಲು ನಮಗೆ ಶ್ರುತಿಯೇ ಆಧಾರ. ಆದ್ದರಿಂದ ಆ ವಾಕ್ಯದ ಅರ್ಥವೇನೆಂದರೆ: ಈ ಮಾತನ್ನು ಸ್ಮರಿಸಿಕೊಳ್ಳಬೇಕು – "ಬ್ರಹ್ಮವಿದಾಪ್ನೋತಿ ಪರಮ್ । ಸತ್ಯಂ ಜ್ಞಾನಮನಂತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಮ್ ।" ಅದನ್ನು ತಿಳಿಸಿಕೊಡುವುದೇ ಪ್ರಕೃತವಾದದ್ದು. ಬ್ರಹ್ಮಸ್ವರೂಪವೇನೆಂಬುದನ್ನು ಇಲ್ಲಿ ತಿಳಿಸಬೇಕಾಗಿದೆ. ಅದಕ್ಕೋಸ್ಕರ ಮೊದಲು ಆಕಾಶದಿಂದ ಅನ್ನಮಯ-ಕೋಶದವರೆಗೆ ಆತ್ಮನಿಂದಾದ ಕಾರ್ಯವನ್ನು ತಿಳಿಸಲಾಯಿತು. ಆಮೇಲೆ ಅದಕ್ಕೆ ಕಾರಣವಾದ ಬ್ರಹ್ಮಸ್ವರೂಪದ ಬೋಧವು ಆರಬ್ಧವಾಯಿತು. ನಮ್ಮ ಬುದ್ಧಿಯನ್ನು ಶ್ರುತಿಯು ಅನ್ನಮಯಾದಿಕೋಶಗಳ ಮೂಲಕ ಒಳಗೆ ತಳ್ಳಿ ವಿಜ್ಞಾನಮಯ ಕೋಶವೆಂಬ ಗುಹೆಯೊಳಗೆ ದೂಡಿತು. 'ಯೋ ವೇದ ನಿಹಿತಂ ಗುಹಾಯಾಂ' ಎಂದು ಶ್ರುತಿಯೇ ಹೇಳಿದೆಯಷ್ಟೆ? ಅನಂತರ ಆನಂದಸ್ವರೂಪವೇ ಆದ ಶುದ್ಧಚೈತನ್ಯವಿದೆಯೆಂಬುದರ ಸೂಚನೆಗಾಗಿ ಆನಂದಮಯಕೋಶವನ್ನು ಶ್ರುತಿಯು ತೋರಿಸಿತು. ನದಿಯಲ್ಲಿರುವ ಶುದ್ಧಜಲದ ಬಳಿಗೆ ಹೋಗುವುದಕ್ಕೆ ಮೊದಲು ಆ ಜಲದಿಂದಲೇ ಒದ್ದೆಯಾದ ಮರಳನ್ನು ತುಳಿಯಬೇಕಾಗುತ್ತದೆ! ಹಾಗೆ ಇದು. ಆನಂದಮಯಕೋಶದ ಪ್ರಿಯಹರ್ಷಾದಿಗಳಿಗೆ ಮೂಲವೂ ಆನಂದೋತ್ಕರ್ಷದ ಪರಮಾವಧಿಯೂ ಆದ ನಿನ್ನ ಆತ್ಮವೇ ಇದು ಎಂದು ಜೀವಾತ್ಮನ ಕಡೆಗೆ ಕೈತೋರಿಸಿ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದು ಶ್ರುತಿಯು ನುಡಿದಿದೆ. ಒಳಗೊಳಗೆ ಹೋಗಬೇಕಾದ ಪದರುಗಳಿರುವ ಬುದ್ಧಿಯೇ ಗುಹೆ. ಈ ಗುಹೆಯಲ್ಲಿಯೇ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು-ಎಂಬ ತಾತ್ಪರ್ಯದಿಂದ ಅನುಪ್ರವೇಶವು ಕಲ್ಪಿತವಾಗಿದೆ. ಬುದ್ಧಿಗುಹೆಯನ್ನು ಪ್ರವೇಶಿಸಿದನು ಎಂದರೆ ಅಲ್ಲಿ ಜೀವ ಎನಿಸಿಕೊಂಡಿದ್ದಾನೆ ಮತ್ತು ಸಾಕ್ಷಾತ್ಕಾರಕ್ಕೆ ದೊರೆಯುತ್ತಾನೆ ಎಂದರ್ಥ.

ಈ ಬಗೆಯ ಆಲಂಕಾರಿಕ ಪ್ರಯೋಗಗಳೂ ಕಲ್ಪಿತಕಥೆಗಳೂ ಪರಮಸತ್ಯವನ್ನು ತಿಳಿಸಿಕೊಡುವುದಕ್ಕಾಗಿ ಬಂದಿರುತ್ತವೆ. ಗುಹೆಯಲ್ಲಿ ಬ್ರಹ್ಮವು ನಿಹಿತವಾಗಿದೆಯೆಂಬುದೂ ಆಲಂಕಾರಿಕ. ಅನುಪ್ರವೇಶವೂ ಆಲಂಕಾರಿಕ. ಪ್ರಕಾಶಾತ್ಮಕವಾದ ಬುದ್ಧಿಯು ಆತ್ಮನ ಉಪಲಬ್ಧಿಗೆ ನಿಮಿತ್ತವಾಗಿದೆ. ಈ ಬುದ್ಧಿಸಂಬಂಧದಿಂದಲೇ ಬ್ರಹ್ಮವು ದ್ರಷ್ಟೃ, ಮಂತೃ, ಶ್ರೋತೃ, ಜ್ಞಾತೃ ಎನಿಸಿಕೊಂಡಿದೆ. ಆದಕಾರಣ ಆಕಾಶಾದಿಗಳಿಗೆ ಕಾರಣವಾದ ಬ್ರಹ್ಮವು ಅಸ್ತಿ ಎಂದು ಸಿದ್ಧವಾಯಿತು. "ಅಸ್ತೀತ್ಯೇವೋಪಲಬ್ಧವ್ಯಃ".

ಸೃಷ್ಟಿಗೆ ಪೂರ್ವದಲ್ಲಿ ಅವ್ಯಾಕೃತವಾಗಿದ್ದ ನಾಮರೂಪಗಳು ಸೃಷ್ಟಿಯ ಆದಿಯಲ್ಲಿ ಪರಮಾತ್ಮನಿಂದ ವ್ಯಾಕೃತವಾದವು. ವ್ಯಾಕೃತವಾದ ನಾಮ ರೂಪಗಳಲ್ಲಿಯೂ ಆತನೇ ಇದ್ದಾನೆ! ಆತ್ಮತಾದಾತ್ಮ್ಯವಿರತಕ್ಕವೇ ನಾಮರೂಪಗಳಾದ್ದರಿಂದ ಆತ್ಮನು 'ಸಚ್ಚ ತ್ಯಚ್ಚಾಭವತ್'. ಸತ್ = ಮೂರ್ತವಸ್ತು. ತ್ಯತ್ = ಅಮೂರ್ತವಸ್ತು. ರೂಪವಿರತಕ್ಕದ್ದು ಮೂರ್ತ. ರೂಪವಿಲ್ಲದ್ದು ಅಮೂರ್ತ. ಆಕಾಶವಾಯುಗಳು ಅಮೂರ್ತ. ಅಗ್ನಿ, ಜಲ, ಪೃಥ್ವಿಗಳು ಮೂರ್ತ. ನಿರುಕ್ತ = ಇದು-ಅದು ಎಂದು ತೋರಿಸಲು ಬರುವ ವಸ್ತು. ಮೂರ್ತವೆಲ್ಲವೂ ನಿರುಕ್ತ. ಅನಿರುಕ್ತ = ಇದು-ಅದು ತೋರಿಸಲು ಬಾರದ ವಸ್ತು. ಅಮೂರ್ತವಾದದ್ದು ಅನಿರುಕ್ತ. ನಿಲಯನ=ಮೂರ್ತವಾದ ಇನ್ನೊಂದು ವಸ್ತುವಿಗೆ ಆಶ್ರಯ. ಇದೂ ಮೂರ್ತವೇ. ಅನಿಲಯನ = ಮೂರ್ತವಸ್ತುವಿಗೆ ಅನಾಶ್ರಯ. ಇದು ಆಕಾಶವಾಯುಗಳ ಸ್ವಭಾವ. ಅಮೂರ್ತ. ವಸ್ತುಸ್ವಭಾವವನ್ನು ವಿವರಿಸುವುದಕ್ಕಾಗಿ ಈ ಶಬ್ದಗಳನ್ನು ಬಳಸಲಾಗಿದೆ. ವಿಜ್ಞಾನ = ಚೇತನವಾದ ಜೀವಿ. ಅವಿಜ್ಞಾನಂ = ಜಡವಾದ ಕಲ್ಲು. ಕಬ್ಬಿಣ ಇತ್ಯಾದಿ. ಸತ್ಯಂ = ವ್ಯಾವಹಾರಿಕವಾದ ಸತ್ಯ. ಮನುಷ್ಯ, ಮರ, ಮಣ್ಣು,ಸಿಮೆಂಟು ಇತ್ಯಾದಿ. ಅನೃತಂ = ವ್ಯಾವಹಾರಿಕವಾದ ಸುಳ್ಳುವಸ್ತು. ಹಗ್ಗದಲ್ಲಿ ಹಾವು, ಕಪ್ಪೆಚಿಪ್ಪಿನ ಬೆಳ್ಳಿ ಇತ್ಯಾದಿ. ನಾಮರೂಪಗಳ ವ್ಯಾಕೃತಿಯನ್ನು ಈ ರೀತಿಯಲ್ಲಿ ತಿಳಿಸಲಾಗಿದೆ. ಪರಮಾರ್ಥವಾಗಿ ಇದೆಲ್ಲವೂ ಏನು? ಬ್ರಹ್ಮವೇ. 'ಸತ್ಯಂ ಜ್ಞಾನಮನಂತಂ ಬ್ರಹ್ಮ'.

ಸತ್ಯಂ ಚಾನೃತಂಚ ಸತ್ಯಮಭವತ್ = ಪರಮಾರ್ಥಸತ್ಯವೇ ಲೌಕಿಕಸತ್ಯವೂ ಭ್ರಮೆಯಿಂದ ತೋರುವ ಅನೃತವೂ ಆಯಿತು! ಯದಿದಂ ಕಿಂ ಚ = ಇನ್ನೂ ಯಾವುದಿದೆಯೋ ಎಲ್ಲವೂ ಬ್ರಹ್ಮವೇ. ತತ್ ಸತ್ಯಮಿತ್ಯಾಚಕ್ಷತೇ = ಆ ಬ್ರಹ್ಮವನ್ನು ಸತ್ಯವೆಂದು ಬ್ರಹ್ಮವಿದರು ಹೇಳುತ್ತಾರೆ.

"ಬಹು ಸ್ಯಾಂ ಪ್ರಜಾಯೇಯ" ಎಂಬುದನ್ನು ಶ್ರುತಿಯೇ ಈ ಪ್ರಕಾರವಾಗಿ ವಿವರಿಸಿ ಹೇಳಿದೆ. ಬ್ರಹ್ಮವೇ ಆಕಾಶಾದಿವಸ್ತುಗಳ ರೂಪದಲ್ಲಿ ಬಹುವಾಗಿ, ಲೋಕದೃಷ್ಟಿಯಿಂದ ಉತ್ಪನ್ನವಾಗಿ, ತಾನು ಮಾನವನ ಹೃದಯಗುಹೆಯಲ್ಲಿ ಕುಳಿತಿದೆ. ಪೂರ್ವೋಕ್ತ ಪ್ರಕಾರದಿಂದ ಜಿಜ್ಞಾಸುವಾದವನು ಅರಿತುಕೊಳ್ಳಬೇಕು. ಆದ್ದರಿಂದ ಬ್ರಹ್ಮವು ಅಸ್ತಿ ಎಂಬುದೇ ಸಿದ್ಧಾಂತ. ಇದನ್ನೇ ಮುಂದಿನ ಮಂತ್ರವು ಮತ್ತೊಂದು ರೀತಿಯಲ್ಲಿ ಸಮರ್ಥಿಸುತ್ತದೆ.

## ಸಪ್ತಮಾನುವಾಕ

**ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ ।**

**ತದಾತ್ಮಾನಗ್ಂ ಸ್ವಯಮಕುರುತ । ತಸ್ಮಾತ್ ತತ್ಸುಕೃತಮುಚ್ಯತ ಇತಿ । ಯದ್ವೈ ತತ್ ಸುಕೃತಮ್ । ರಸೋ ವೈ ಸಃ । ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ । ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವಾನಂದಯಾತಿ । ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇऽನಾತ್ಮ್ಯೇऽನಿರುಕ್ತೇऽ ನಿಲಯನೇऽಭಯಂ ಪ್ರತಿಷ್ಠಾಂ ವಿಂದತೇ। ಅಥ ಸೋऽಭಯಂಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ತ್ವೇವ ಭಯಂ ವಿದುಷೋ ಮನ್ವಾನಸ್ಯ । ತದಪ್ಯೇಷ ಶ್ಲೋಕೋ ಭವತಿ ॥೧॥**

**ಅಸದ್ವಾ ಇದಮಗ್ರ ಆಸೀತ್**

ಇದಂ = ದೃಶ್ಯಮಾನವಾದ ಈ ಜಗತ್ತು, ಅಗ್ರೇ = ಸೃಷ್ಟಿಗೆ ಪೂರ್ವದಲ್ಲಿ, ಅಸತ್ = ನಾಮರೂಪಗಳಿಲ್ಲದೆ ಅವ್ಯಾಕೃತವಾಗಿ, ಆಸೀತ್ = ಇದ್ದಿತು. ನಾಮರೂಪಗಳಿಲ್ಲದಿರುವ ಅವ್ಯಾಕೃತಬ್ರಹ್ಮವನ್ನು ಇಲ್ಲಿ ಅಸತ್ ಎಂದು ಕರೆಯಲಾಗಿದೆ. ಮುಂದಿನ ವಾಕ್ಯದಲ್ಲಿ ಅಸತ್ತಿನಿಂದ ಸತ್ ಹುಟ್ಟಿತು ಎಂದಿದೆ. ಆದ್ದರಿಂದ ಅಸತ್ ಎಂದರೆ ಶೂನ್ಯವಲ್ಲ. ಶೂನ್ಯದಿಂದ ಯಾವುದೂ ಹುಟ್ಟುವುದಿಲ್ಲ. ಲೌಕಿಕ ದೃಷ್ಟಿಯಿಂದ ನಾಮರೂಪಗಳಿಲ್ಲದ್ದು ಅಸತ್. ಅದೇ ಸತ್ಯಜ್ಞಾನಾನಂತವಾದ ಬ್ರಹ್ಮ. ಅದು ತನ್ನ ಮಾಯೆಯಿಂದ ತನ್ನನ್ನು ತಾನೇ ಸತ್ – ತ್ಯತ್ ರೂಪವಾಗಿ ಮಾರ್ಪಡಿಸಿಕೊಂಡಿತು. ಆದ್ದರಿಂದ ನಾಮರೂಪಗಳಿಂದ ಕೂಡಿ ಸತ್–ತ್ಯದ್ರೂಪವಾದ ಈ ಜಗತ್ತು ಬ್ರಹ್ಮವಸ್ತುವಿಗಿಂತ ಬೇರೆಯಾದದ್ದಲ್ಲ. ತಂದೆಯಿಂದ ಮಗನು ಹುಟ್ಟುವಂತೆ ಜಗತ್ತು ಅನ್ಯವಸ್ತುವಾಗಿ ಹುಟ್ಟಲಿಲ್ಲ. ತನ್ನನ್ನೇ ಜಗತ್ತನ್ನಾಗಿ ಮಾಡಿಕೊಂಡಿತು. ಆದ್ದರಿಂದ ಬ್ರಹ್ಮವಸ್ತುವಿಗೆ 'ಸುಕೃತ' ಎಂದು ಹೆಸರು! ಸುಕೃತ ಶಬ್ದದ ಅರ್ಥವೇನು?

೧. ಬೇರೊಂದು ಸಾಧನವಿಲ್ಲದೆ ಈ ಅದ್ಭುತವಾದ ಜಗತ್ತನ್ನು ಸ್ವಯಂ ನಿರ್ಮಿಸಿ ಇದರ ಕರ್ತೃವಾದ್ದರಿಂದ ಬ್ರಹ್ಮವು ಸುಕೃತ. ವೈದಿಕಶಬ್ದವಾದ್ದರಿಂದ ಕರ್ತರಿ ಕ್ತ ಪ್ರತ್ಯಯ ಬಂದಿದೆ.

೨. ಸುಕೃತ ಶಬ್ದಕ್ಕೆ ಪುಣ್ಯ ಎಂಬ ಅರ್ಥವಿದೆ. ಸರ್ವವನ್ನೂ ನಿರ್ಮಿಸಿ ಸರ್ವರೂಪದಲ್ಲಿಯೂ ಅವಸ್ಥಿತವಾದ ಬ್ರಹ್ಮವು ಪುಣ್ಯರೂಪದಲ್ಲಿಯೂ ಇದೆ. ಆದ್ದರಿಂದ ಬ್ರಹ್ಮವನ್ನು ಸುಕೃತ ಎಂದು ಬ್ರಹ್ಮವಿದರು ಹೇಳುತ್ತಾರೆ.

೩. ಅಥವಾ ಈ ವಿಶ್ವವನ್ನೇ ಸುಕೃತ ಎಂದು ಹೇಳಬಹುದು.

ಪರಮೇಶ್ವರನೇ ಸ್ವಯಂ ನಿರ್ಮಿಸಿದ್ದರಿಂದ ಸೊಗಸಾಗಿಯೇ ರಚಿಸಿದ್ದಾನೆ ಎಂಬ ಅಭಿಪ್ರಾಯದಿಂದ ವಿಶ್ವವೇ ಸುಕೃತ. ಸುಂದರವಾಗಿ ರಚಿತ ಎಂದರ್ಥ.

ವಸ್ತುತಃ ಬ್ರಹ್ಮವಿದೆ ಎಂದು ಸಾಧಿಸುವುದಕ್ಕಾಗಿ ಇದನ್ನು ಹೇಳಿರುವುದರಿಂದ ಪ್ರಕರಣಾನುರೋಧವಾಗಿ ತಾತ್ಪರ್ಯವನ್ನು ಹೀಗೆ ಹೇಳಬೇಕು. ಸುಕೃತವೆಂದರೆ ಸ್ವರ್ಗಾದಿಫಲವನ್ನು ಕೊಡುವ ಪುಣ್ಯಕಾರ್ಯ. ಅದನ್ನು ಆಚರಿಸಿದ ಕೂಡಲೇ ಪುಣ್ಯಕ್ರಿಯೆಯು ನಷ್ಟವಾಗಿ ಬಿಡುತ್ತದೆ. ಕಾಲಾಂತರದಲ್ಲಿ ಅದು ಹೇಗೆ ಫಲವನ್ನು ಕೊಟ್ಟೀತು? ಫಲವು ಅವಶ್ಯವಾಗಿ ದೊರೆಯುತ್ತದೆ. ಅಂತಹ ಫಲವನ್ನು ಕೊಡತಕ್ಕವನು ಈಶ್ವರ. ಆದ್ದರಿಂದ ಪರಬ್ರಹ್ಮವು ನಿಶ್ಚಯವಾಗಿ ಇದೆ. ಆದ್ದರಿಂದಲೇ ಪುಣ್ಯ–ಪಾಪ ಎಂಬ ಶಾಸ್ತ್ರ ಪ್ರಸಿದ್ಧಿಯು ಸಾರ್ಥಕವಾಗುತ್ತದೆ ಎಂದು ತಾತ್ಪರ್ಯ.

ಬ್ರಹ್ಮವು ಇದೆ. ಹೇಗೆಂದರೆ, ಯಾವ ಬ್ರಹ್ಮವು ಸುಕೃತವೆನಿಸಿದೆಯೋ ಅದೇ ರಸವೂ ಹೌದು. ಸಿಹಿ, ಹುಳಿ ಮುಂತಾದ ರಸವು ಜನರಿಗೆ ತೃಪ್ತಿಯನ್ನು–ಆನಂದವನ್ನು ಕೊಡುತ್ತದೆಯೆಂಬುದು ಲೋಕದಲ್ಲಿ ಪ್ರಸಿದ್ಧವಾಗಿದೆಯಷ್ಟೆ? ಹಾಗೆ ಯಾವುದೇ ಒಂದು ಬಾಹ್ಯವಾದ ಆನಂದಕಾರಣವೂ ಇಲ್ಲದೆ ವಿರಕ್ತರೂ ನಿರೀಹರೂ ಆದ ಜ್ಞಾನಿಗಳು ಆನಂದದಿಂದ ತುಂಬಿರುತ್ತಾರೆ. ಅವರ ಆನಂದಕ್ಕೆ ನಿಮಿತ್ತವೇನು? ನಿಮಿತ್ತವಾದ ರಸ ಯಾವುದು? ಬ್ರಹ್ಮವೇ ಅವರಿಗೆ ರಸ. ಅದನ್ನು ಪಡೆದು ಆನಂದಿಸುತ್ತಾರೆ. ಆದ್ದರಿಂದ ಬ್ರಹ್ಮವಸ್ತು ಇದೆ. ಲೋಕದಲ್ಲಿ ಜನರು ಅನುಭವಿಸುವ ವಿಷಯಾನಂದವೂ ಈ ಬ್ರಹ್ಮಾನಂದದ ಒಂದು ಕಣವೆಂದು ಹಿಂದೆ ತಿಳಿಸಿದ್ದಾಗಿದೆ.

ಬ್ರಹ್ಮವು ಇದೆ. ಆದ್ದರಿಂದಲೇ ದೇಹದಲ್ಲಿ ಪ್ರಾಣಾದಿ ಕ್ರಿಯೆಗಳು ನಡೆಯುತ್ತವೆ. "ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್" ಹೃದಯಾಕಾಶದಲ್ಲಿ ಆನಂದಸ್ವರೂಪನಾದ ಆತ್ಮನು ಇಲ್ಲದೇಹೋಗಿದ್ದರೆ, ಯಾವ ದೇಹವು ಪ್ರಾಣಾಪಾನಾದಿಕ್ರಿಯೆಗಳನ್ನು ಮಾಡುತ್ತಿತ್ತು? ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ–ಎಂಬಿವು ಪಂಚ ವಾಯುಗಳು ದೇಹದಲ್ಲಿ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತವೆ. ಪ್ರಾಣನಾರ್ಥಕವಾದ ಅನಧಾತುವಿನಿಂದ ಈ ಎಲ್ಲ ಶಬ್ದಗಳೂ ನಿಷ್ಪನ್ನವಾಗಿವೆ. ಅನ್ಯಾತ್ = ಅನಧಾತುವಿನ ಲಿಙ್ ರೂಪ. ಪ್ರಾಣ್ಯಾತ್ ಎಂಬಲ್ಲಿಯೂ ಇದೇ ರೂಪ. ಪ್ರ ಎಂಬ ಉಪಸರ್ಗದಲ್ಲಿ ರೇಫವಿರುವುದರಿಂದ ಣತ್ವ ಬಂದಿದೆ. ಈ ಪಂಚವಾಯುಗಳು ತಮಗೆ ಗೊತ್ತಾದ ಕ್ರಿಯೆಗಳನ್ನು ದೇಹದಲ್ಲಿ ಮಾಡುತ್ತಲೇ

ಇರುತ್ತವೆ. ಪ್ರಾಣವಾಯುವು ಉಸಿರಾಡುವ ಕೆಲಸವನ್ನು ಮಾಡುತ್ತದೆ. ಇದು ಪ್ರಧಾನವಾದ್ದರಿಂದ ಪ್ರತ್ಯೇಕವಾಗಿ ಹೇಳಲಾಗಿದೆ. ಅನ್ಯಾತ್ ಎಂಬುದರಿಂದ ಉಳಿದ ನಾಲ್ಕು ವಾಯುಗಳ ಕ್ರಿಯೆಗಳನ್ನು ಗ್ರಹಿಸಬೇಕು. ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳನ್ನು ಉಪಲಕ್ಷಣದಿಂದ ಗ್ರಹಿಸಬೇಕು. ದೇಹದಲ್ಲಿ ಆತ್ಮನು ನೆಲೆಸದಿದ್ದರೆ ಈ ವಾಯುಗಳೂ ಇಂದ್ರಿಯಗಳೂ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿದ್ದವೆ? ಕೆಲಸ ಮಾಡುವ ಚೈತನ್ಯವಾದರೂ ಇರುತ್ತಿತ್ತೆ? ಮತ್ತು ಇವೆಲ್ಲ ಯಾರಿಗಾಗಿ ಕೆಲಸ ಮಾಡುತ್ತವೆ? ಇವುಗಳಿಗೆ ಕೆಲಸ ಮಾಡುವ ಶಕ್ತಿಯನ್ನು ನೀಡಿದವನೂ ದೇಹಕ್ಕೆ ಸ್ವಾಮಿಯೂ ಆದ ಆತ್ಮನಿಗಾಗಿ ಇವು ತಮ್ಮ ಕಾರ್ಯದಲ್ಲಿ ತೊಡಗಿವೆಯೆಂದು ತಿಳಿಯಬೇಕು. ಆದ್ದರಿಂದ ಬ್ರಹ್ಮ ಇದೆ. ಈ ಪಂಚವಾಯುಗಳೂ ಇಂದ್ರಿಯಗಳೂ ದೇಹವೂ ಏತಕ್ಕಾಗಿ ಕೆಲಸಮಾಡುತ್ತವೆ? ಆನಂದಕ್ಕಾಗಿ. ಜನರಿಗೆ ಆನಂದವನ್ನು ಕೊಡತಕ್ಕವನೇ ಆತ್ಮ. ಅವರವರ ಕರ್ಮಾನುಗುಣವಾಗಿ ಜನರನ್ನು ಆನಂದಪಡಿಸತಕ್ಕವನೇ ಆತ್ಮ.

ಆನಂದಯಾತಿ–ಎಂಬಲ್ಲಿ ಛಾಂದಸವಾದ ಲೇಟ್ ಪ್ರತ್ಯಯ ಬಂದಿದೆ. ಅದಕ್ಕೆ 'ಲೇಟೋಽಡಾಟೌ' (೩–೪–೯೪) ಎಂಬ ಪಾಣಿನಿಸೂತ್ರದಿಂದ ಆಡಾಗಮ ಬಂದಿದೆ. ಆನಂದಯತಿ ಎಂದರ್ಥ.

ಈ ಆನಂದಾತ್ಮನು ಸರ್ವರ ಹೃದಯದಲ್ಲಿಯೂ ನೆಲೆಸಿ ಪ್ರಾಪ್ತನಾಗಿಯೇ ಇದ್ದಾನೆ. ಆದರೂ ಜನರು ಅವಿದ್ಯೆಯಿಂದ ಅದನ್ನು ಮರೆತು, ಆತನು ಅಪ್ರಾಪ್ತನೆಂದು ಎಲ್ಲಿಯೋ ಹುಡುಕುತ್ತಿದ್ದಾರೆ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥** ಗೀತಾ ೧೮–೬೧.

"ಅರ್ಜುನ, ಪ್ರಭುವಾದ ಈಶ್ವರನು ಸರ್ವಪ್ರಾಣಿಗಳ ಹೃದಯದಲ್ಲಿ ಇದ್ದಾನೆ. ದೇಹವೆಂಬ ಯಂತ್ರವನ್ನೇರಿದ ಈ ಪ್ರಾಣಿಗಳನ್ನು ಮಾಯೆಯಿಂದ ತಿರುಗಿಸುತ್ತಿದ್ದಾನೆ."

ಶ್ರೀಸುರೇಶ್ವರಾಚಾರ್ಯರು ಭಾಷ್ಯವಾರ್ತಿಕದಲ್ಲಿ ಹೇಳುತ್ತಾರೆ –

**ಯದಾ ಹ್ಯೇವೇಷ ಆತ್ಮೈಕೋ ದೃಶ್ಯತ್ವಾದಿವಿವರ್ಜಿತಃ ।**
**ಏತಸ್ಮಿನ್ ವರ್ತಮಾನೋಽಪಿ ವಂಚಿತೋಽವಿದ್ಯಯೈವ ಹಿ ॥** –ವಾರ್ತಿಕ. ೭–೬೧

"ದೃಶ್ಯತ್ವಾದಿಧರ್ಮಗಳಿಲ್ಲದ ಈ ಅದ್ವಿತೀಯಾತ್ಮನು ಜನರ ಹೃದಯದಲ್ಲಿಯೇ ಇದ್ದರೂ ಇಲ್ಲವೆಂದು ಜನರು ಅವಿದ್ಯೆಯಿಂದ ವಂಚಿತರಾಗಿದ್ದಾರೆ."

ಎಲ್ಲರ ಹೃದಯದಲ್ಲಿಯೂ ಆನಂದಾತ್ಮನಿದ್ದಾನೆಂದರೆ, ಈ ಮೂಢ ಜನರು ಹೇಗೆ ಅರ್ಥಮಾಡಿಕೊಳ್ಳುತ್ತಾರೆ, ಗೊತ್ತೆ? ಎಲ್ಲರ ಕೈಗಳಲ್ಲೂ ನೆಲ್ಲಿಕಾಯಿಗಳಿವೆಯೆಂದರೆ, ಹೇಗೆ ಅರ್ಥಮಾಡಿಕೊಳ್ಳುತ್ತಾರೋ ಹಾಗೆ! ನೆಲ್ಲಿಕಾಯಿಗಳಂತೆ ಸಾವಿರಾರು ಆತ್ಮರಿದ್ದಾರೆ. ಹೃದಯದಲ್ಲಿ ಆತ್ಮನಿದ್ದಾನೆಂದರೆ, ನೆಲ್ಲಿಕಾಯಿಗಿಂತ ಬಹಳ ಚಿಕ್ಕವನು ಆತ್ಮ–ಎಂದು ಭ್ರಾಂತರಾಗುತ್ತಾರೆ! ಆದ್ದರಿಂದ ಯದಾ ಹ್ಯೇವೈಷಃ = ಯಾವಾಗ ಈ ಮನುಷ್ಯನು, ಏತಸ್ಮಿನ್ = ಈ ಆನಂದಸ್ವರೂಪನೂ, ಅದೃಶ್ಯೇ = ಇಂದ್ರಿಯಗಳಿಗೆ ಅಗೋಚರನೂ, ಅನಾತ್ಮ್ಯೇ = ಶರೀರರಹಿತನೂ, ಅನಿರುಕ್ತೇ = ಸರ್ವವಿಕಾರರಹಿತನೂ, ಅನಿಲಯನೇ = ಆಧಾರವಸ್ತುವಿಲ್ಲದೆಯೇ ಇರತಕ್ಕವನೂ ಆಗಿ ಸರ್ವದೃಶ್ಯವಸ್ತು ವಿಲಕ್ಷಣನಾದ ಪರಬ್ರಹ್ಮನಲ್ಲಿ, ಅಭಯಂ ಪ್ರತಿಷ್ಠಾಂ ವಿಂದತೇ = ನಿರ್ಭಯದಿಂದ ಅವನೇ ನಾನು – ನಾನೇ ಅವನು ಎಂಬ ದೃಢವಿಶ್ವಾಸವನ್ನು ತಳೆಯುತ್ತಾನೋ, ಅಥ ಸೋಽಭಯಂ ಗತೋ ಭವತಿ = ಆಗ ಮಾತ್ರ ಆತನು ಸರ್ವವಿಧ ಭಯವನ್ನು ತೊಡೆದುಹಾಕಿ ಧೀರನಾಗಿ ಬಿಡುತ್ತಾನೆ ಎಂದು ತಾತ್ಪರ್ಯಾರ್ಥ.

ಈ ಪ್ರಕಾರದಲ್ಲಿರುವ ಜ್ಞಾನಿಗೆ ಭಯವೆಲ್ಲಿಯದು? ಭಯವು ಯಾವಾಗಲೂ ಇನ್ನೊಂದು ವಸ್ತುವಿನಿಂದ ಹುಟ್ಟುತ್ತದೆ. ಇನ್ನೊಂದು ವಸ್ತುವೇ ಇಲ್ಲವೆಂದೂ, ತೋರುವ ಇನ್ನೊಂದು ಮಿಥ್ಯೆಯೆಂದೂ ತಿಳಿದ ಅದ್ವೈತಜ್ಞಾನಿಯು ಏಕೆ ಹೆದರುತ್ತಾನೆ? ಅವನಿಗೆ ಹೆದರಿಕೆಯನ್ನುಂಟುಮಾಡುವ ಇನ್ನೊಂದು ವಸ್ತುವಾದರೂ ಯಾವುದು? 'ದ್ವಿತೀಯಾದ್ವೈ ಭಯಂ ಭವತಿ' (ಬೃಹ. ೧–೪–೨).

ಸರ್ಪವ್ಯಾಘ್ರಾದಿಗಳು ಬ್ರಹ್ಮವಿದನ ದೇಹಕ್ಕೆ ವಿಪತ್ತನ್ನುಂಟು ಮಾಡಬಹುದು. ಅದಕ್ಕಾಗಿ ಬ್ರಹ್ಮವಿದನು ಅಂಜುವುದಿಲ್ಲ. ತನ್ನ ದೇಹವೂ ಮಾಯಾಕಲ್ಪಿತವೆಂದೂ ಸರ್ಪಾದಿಗಳು ಮಾಯಾಕಲ್ಪಿತಗಳೆಂದೂ ಆತನು ತಿಳಿದಿರುತ್ತಾನೆ. "ಮಾಯೆಯು ಮಾಯೆಯನ್ನು ನುಂಗಿತು! ಆತ್ಮನಾದ ನನಗಾದದ್ದೇನು?" ಎಂದು ಆನಂದದಿಂದಲೇ ಇರುತ್ತಾನೆ. ಆದ್ದರಿಂದ ಬ್ರಹ್ಮವಿದೆ.

ಯಾವಾಗ ಅವಿದ್ಯಾವಂತನಾದ ಅಜ್ಞಾನಿಯು ಏತಸ್ಮಿನ್ = ಈ ಅಭಯ ಬ್ರಹ್ಮದಲ್ಲಿ, ಉತ್ = ಕೂಡ, ಅರಂ = ಸ್ವಲ್ಪವಾದರೂ, ಅಂತರಂ = ತನಗಿಂತ ಬ್ರಹ್ಮವು ಬೇರೆಯೆಂಬ ಭೇದವನ್ನು, ಕುರುತೇ = ಮಾಡುತ್ತಾನೋ ಆಗ ಭಯಕ್ಕೆ ಒಳಗಾಗುತ್ತಾನೆ. ಆದ್ದರಿಂದ ಆತನು ಸರ್ವಶಾಸ್ತ್ರಗಳನ್ನು ಬಲ್ಲ ವಿದ್ವಾಂಸನಾದರೂ ವಿದ್ವಾಂಸನಲ್ಲವೆಂದೇ ತಿಳಿಯಬೇಕು.

ಜಗತ್ತಿನಲ್ಲಿ ಮನುಷ್ಯರಿಂದ ಹಿಡಿದು ಸಕಲಪ್ರಾಣಿಗಳೂ ಒಂದಲ್ಲ ಒಂದು ಕಾರಣದಿಂದ ಹೆದರುತ್ತಾರೆ. ಈ ಹೆದರಿಕೆ ಎಂಬುದು ಅನಾದಿಕಾಲದಿಂದಲೂ

ಇದೆ. ಆ ಹೆದರಿಕೆಗೆ ಕಾರಣವಾದ ಒಂದು ವಸ್ತು ಶಾಶ್ವತವಾಗಿ ಇದ್ದೇ ಇರುತ್ತದೆ ಎಂದು ಸಿದ್ಧವಾಗುತ್ತದೆ. ಹೆದರಿಕೆಗೆ ಕಾರಣವಾದ ಮೂಲವಸ್ತುವೇ ರೂಪಾಂತರದಲ್ಲಿ ಬ್ರಹ್ಮ. ಆದ್ದರಿಂದ ಬ್ರಹ್ಮವಿದೆ. ಅಸ್ತಿ ಬ್ರಹ್ಮ.

## ಅಷ್ಟಮಾನುವಾಕ

**ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ । ಸೈಷಾನಂದಸ್ಯ ಮೀಮಾಗ್‌ಂಸಾ ಭವತಿ । ಯುವಾ ಸ್ಯಾತ್ ಸಾಧು ಯುವಾಧ್ಯಾಯಕಃ । ಆಶಿಷ್ಠೋದೃಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾಸ್ಯಾತ್ । ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ ॥**

**ಸ ಏಕೋ ಮನುಷ್ಯ ಗಂಧರ್ವಾಣಾಮಾನಂದಃ । ಶ್ರೋತಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಾಃ । ಸ ಏಕೋ ದೇವಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಗಂಧರ್ವಾಣಾಮಾನಂದಾಃ । ಸ ಏಕಃ ಪಿತೃಣಾಂ ಚಿರಲೋಕಲೋಕಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಪಿತೃಣಾಂ ಚಿರಲೋಕಲೋಕಾನಾಮಾನಂದಾಃ । ಸ ಏಕ ಆಜಾನಜಾನಾಂ ದೇವಾನಾಮಾನಂದಃ ॥**

**ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಾಜಾನಜಾನಾಂ ದೇವಾನಾಮಾನಂದಾಃ । ಸ ಏಕಃ ಕರ್ಮದೇವಾನಾಂ ದೇವಾನಾಮಾನಂದಃ । ಯೇ ಕರ್ಮಣಾ ದೇವಾನಪಿಯಂತಿ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನಂದಾಃ । ಸ ಏಕೋ ದೇವಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಾನಾಮಾನಂದಾಃ । ಸ ಏಕ ಇಂದ್ರಸ್ಯಾನಂದಃ ॥**

**ಶ್ರೋತಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಿಂದ್ರಸ್ಯಾನಂದಾಃ । ಸ ಏಕೋ ಬೃಹಸ್ಪತೇರಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಬೃಹಸ್ಪತೇರಾನಂದಾಃ । ಸ ಏಕಃ ಪ್ರಜಾಪತೇರಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಪ್ರಜಾಪತೇರಾನಂದಾಃ । ಸ ಏಕೋ ಬ್ರಹ್ಮಣ ಆನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥೪॥**

**ಸಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸಯ ಏವಂವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನ-ಮುಪಸಂಕ್ರಾಮತಿ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ । ಏತಂ ಮನೋಮಯಮಾತ್ಮಾನಮುಪಸಂಕ್ರಾಮತಿ । ಏತಂ ವಿಜ್ಞಾನಮಯಮಾತ್ಮಾನ-ಮುಪಸಂಕ್ರಾಮತಿ । ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ । ತದಪ್ಯೇಷ ಶ್ಲೋಕೋ ಭವತಿ ॥**

ಅದ್ವಿತೀಯನಾದ ಈ ಪ್ರತ್ಯಗಾತ್ಮನ ಸ್ವರೂಪಜ್ಞಾನವಿಲ್ಲದ್ದರಿಂದಲೇ ಮಹಾಶಕ್ತಿಶಾಲಿಗಳೂ ಪೂಜ್ಯರೂ ಆದ ಮಹಾಪುರುಷರೂ ಸಹ ಅಂಜುತ್ತ ಅಂಜುತ್ತ ಆಯಾಸಪ್ರದವಾದ ಕಾರ್ಯಗಳನ್ನು ಮಾಡುತ್ತಿದ್ದಾರೆ. ವಾಯುದೇವನು ಬೀಸುತ್ತಲೇ ಇದ್ದಾನೆ. ಸೂರ್ಯನು ಪೂರ್ವದಿಕ್ಕಿನಲ್ಲಿ ಉದಿಸಿ ಆಕಾಶದಲ್ಲಿ ಮೆರೆದು ಪಶ್ಚಿಮದಲ್ಲಿ ಮುಳುಗಿ ಮತ್ತೆ ಪೂರ್ವದಲ್ಲಿ ಉದಿಸುತ್ತಲೇ ಇದ್ದಾನೆ. ಇಂದ್ರಾಗ್ನಿಗಳೂ ಸಹ ತಮಗೆ ವಹಿಸಿದ ಕಾರ್ಯವನ್ನು ಮಾಡುತ್ತಿದ್ದಾರೆ. ಸರ್ವಭಯಂಕರನಾದ ಯಮರಾಜನೂ ಈ ಬ್ರಹ್ಮವಸ್ತುವಿಗೆ ಹೆದರಿ, ವಿರಾಮವೇ ಇಲ್ಲದೆ ಓಡುತ್ತಲೇ ಇದ್ದಾನೆ! ಸೇವಕರು ತಮ್ಮ ಪ್ರಭುವಾದ ರಾಜನಿಗೆ ಹೆದರಿ ಕೆಲಸವನ್ನು ಮಾಡುವಂತೆ, ಈ ದೇವ ಪುರುಷರೂ ಸಹ ಬ್ರಹ್ಮಕ್ಕೆ ಅಂಜಿ ತಮ್ಮ ಕೆಲಸದಲ್ಲಿ ಸತತವೂ ತೊಡಗಿರುತ್ತಾರೆ.

ಭೃತ್ಯರು ತಮ್ಮ ಒಡೆಯನಿಗೆ ಹೆದರಿ ಕಾರ್ಯದಲ್ಲಿ ತೊಡಗುವುದೇಕೆ? ವಸ್ತ್ರಾಹಾರಾದಿಗಳಿಂದ ದೊರೆಯುವ ಅಲ್ಪಪ್ರಮಾಣದ ಆನಂದಕ್ಕಾಗಿ. ಈ ಆನಂದದಲ್ಲಿ ಏರುಪೇರುಗಳುಂಟು. ಅದನ್ನೀಗ ಪರಿಶೀಲಿಸೋಣ.

ಮನುಷ್ಯನಿಗೆ ದೊರೆಯುವ ಆನಂದವು ಹೆಚ್ಚೆಂದರೆ ಎಷ್ಟಿರಬಹುದು? ಅದನ್ನು ಊಹೆಯಿಂದ ತಿಳಿಯಬೇಕಾಗುತ್ತದೆ. ಮಾನವರಿಂದ ಹಿಡಿದು ಹಿರಣ್ಯಗರ್ಭ ಪ್ರಜಾಪತಿಯವರೆಗೆ ಎಲ್ಲರೂ ಅವಿದ್ಯೆಯಲ್ಲಿ ಸಿಲುಕಿದವರೇ. ಆದರೂ ಶಾಸ್ತ್ರಾಧ್ಯಯನದಿಂದಲೂ ಲೋಕಾನುಭವದಿಂದಾದ ವಿವೇಕದಿಂದಲೂ ಉಪಾಸನಾದಿ ಸಾಧನೆಗಳ ಬಲದಿಂದಲೂ ಸುಖಸಾಮಗ್ರಿಗಳ ವೈವಿಧ್ಯದಿಂದಲೂ ಸಹ ಆನಂದದಲ್ಲಿ ಸರ್ವತ್ರ ತಾರತಮ್ಯ ಉಂಟಾಗುತ್ತದೆ. ಜನ್ಮಾಂತರದ ಸಂಸ್ಕಾರವೂ ಆನಂದಾನುಭವಕ್ಕೆ ಸಹಕರಿಸುತ್ತದೆ. ಉದಾಹರಣೆಗೆ, ಕಾವ್ಯಸಂಗೀತಗಳು ಕೆಲವರಿಗೆ ಪರಮಾನಂದವನ್ನುಂಟುಮಾಡುತ್ತವೆ. ಕೆಲವರಿಗೆ ಅವುಗಳಿಂದ ಏನೂ ಆಗುವುದಿಲ್ಲ!

ಆನಂದವು ಲೌಕಿಕ, ಸ್ವಾಭಾವಿಕ ಎಂದು ಎರಡು ವಿಧ. ಬಾಹ್ಯಶಬ್ದಾದಿ ವಿಷಯಗಳನ್ನೂ ದೈಹಿಕವಾದ ಆರೋಗ್ಯ ಯೌವನಾದಿಗಳನ್ನೂ ಅವಲಂಬಿಸಿ

ಬರತಕ್ಕದ್ದು ಲೌಕಿಕ. ಬ್ರಹ್ಮವಿದರಿಗೆ ಪ್ರಾಪ್ತವಾಗುವ ಬ್ರಹ್ಮಾನಂದವು ಸ್ವಾಭಾವಿಕ. ಅವಿದ್ಯಾವಿಶಿಷ್ಟರಿಗೆ ದೊರೆಯುವುದು ಲೌಕಿಕ. ಹಿಂದೆ ಹೇಳಿದಂತೆ ಅದರಲ್ಲಿ ಬೇರೆಬೇರೆ ಕಾರಣದಿಂದ ತಾರತಮ್ಯವಿರುತ್ತದೆ. ಸ್ವಾಭಾವಿಕಾನಂದವು ಏಕಪ್ರಕಾರವಾದದ್ದು. ಆದರೆ ಈ ಲೌಕಿಕಾನಂದವೆಲ್ಲವೂ ಸ್ವಾಭಾವಿಕವಾದ ಬ್ರಹ್ಮಾನಂದಸಾಗರದ ಒಂದು ಹನಿಯೆಂಬುದನ್ನು ತಿಳಿದಿರಬೇಕು.

ಲೋಕದಲ್ಲಿ ಸಾಧುಸ್ವಭಾವದವನೂ ವಿದ್ಯಾವಂತನೂ ಆದ ಒಬ್ಬ ಯುವಕನಿದ್ದಾನೆಂದು ತಿಳಿಯೋಣ. ಅವನು ವಿವೇಕಿಯೂ ದೃಢಕಾಯನೂ ಬಲಿಷ್ಠನೂ ಆಗಿರುತ್ತಾನೆ. ಅವನು ಪೃಥ್ವಿಯ ಸಾರ್ವಭೌಮನಾಗಿ ಬೇಕಾದಷ್ಟು ಐಶ್ವರ್ಯಶಾಲಿಯೆಂದು ತಿಳಿಯೋಣ. ಯಥೇಚ್ಛವಾಗಿ ಭೋಗಸಾಧನಗಳು ಅವನಲ್ಲಿವೆ. ಯಾವ ಕೊರತೆಯೂ ಇಲ್ಲದವನು. ಅವನಿಗೆ ದೊರೆಯುವ ಪರಮಾನಂದವನ್ನು ಒಂದು ಮಾನುಷಾನಂದವೆಂದು ತಿಳಿಯಬೇಕು. ಇದು ಲೌಕಿಕವಾದ ವಿಷಯಭೋಗಜನ್ಯ ಆನಂದ. ಇದು ಬ್ರಹ್ಮಾನಂದದ ಉತ್ಕರ್ಷವನ್ನು ಊಹಿಸಲು ಬಳಸಿದ ಅಳತೆಗೋಲು. ಬ್ರಹ್ಮಾನಂದವು ಕೇವಲ ಸಹಜಾನಂದವೆಂದೂ ವಿಷಯಭೋಗದ ಸ್ಪರ್ಶವೂ ಅದರಲ್ಲಿಲ್ಲವೆಂದೂ ತಿಳಿದಿರಬೇಕು.

ಮೇಲೆ ಹೇಳಿದ ಮಾನುಷಾನಂದ ನೂರರಷ್ಟು ಅಧಿಕವಾದದ್ದು ಮನುಷ್ಯಗಂಧರ್ವರ ಆನಂದ. ಮೊದಲು ಮನುಷ್ಯರಾಗಿದ್ದು ತಮ್ಮ ಅನುಷ್ಠಾನದಿಂದಲೂ ಮಂತ್ರವಿದ್ಯಾಬಲದಿಂದಲೂ ಅಂತರ್ಧಾನಾದಿ-ಶಕ್ತಿಸಂಪನ್ನರಾಗಿ ಗಂಧರ್ವರಾಗಿ ಜನಿಸಿದವರು. ಶೀತೋಷ್ಣಾದಿಗಳ ಬಾಧೆಯಿಲ್ಲದವರು. ಬಂದ ವಿಪತ್ತನ್ನು ನೀಗಿಸಿಕೊಳ್ಳುವ ಸಾಮರ್ಥ್ಯವುಳ್ಳ ಇವರು ಮನುಷ್ಯ ಗಂಧರ್ವರು. ಈ ಮನುಷ್ಯಗಂಧರ್ವರ ಆನಂದವು ಅಕಾಮಹತನಾದ ಶ್ರೋತ್ರಿಯನಿಗೂ ಇರುತ್ತದೆ. ಶ್ರೋತ್ರಿಯನೆಂದರೆ ವೇದಾಧ್ಯಯನಸಂಪನ್ನನೂ ವಿಧಿವಿಹಿತಕರ್ಮಾನುಷ್ಠಾನಗಳನ್ನು ಆಚರಿಸತಕ್ಕವನೂ ಆದ ವಿದ್ವಾಂಸ. ಅವನು ಯಾವ ದುರಾಸೆಯನ್ನೂ ಇಟ್ಟುಕೊಂಡಿರಬಾರದು. ಅಂತಹವನು ಅಕಾಮಹತ. ದುರಾಸೆಯಿದ್ದರೆ ಕಾಮಹತ. ಹೀಗೆ ಪ್ರತಿಪರ್ಯಾಯದಲ್ಲಿ 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎಂಬ ವಾಕ್ಯಬರುತ್ತದೆ. ವಿದ್ಯೆಯ ಆಧಿಕ್ಯ, ಜನ್ಮಾಂತರೀಯ ಪಾಪಕರ್ಮದ ಕ್ಷಯ-ಇವುಗಳಿಂದ ಅವನ ಆನಂದವು ಉತ್ಕೃಷ್ಟವಾಗುತ್ತ ಹೋಗುತ್ತದೆ. ಹೀಗೆಯೇ ಮುಂದೆ ದೇವಗಂಧರ್ವಾದಿಗಳಲ್ಲಿ ಆನಂದವು ಶತಗುಣದಷ್ಟು ಹೆಚ್ಚುತ್ತ ಹೋಗುತ್ತದೆ.

೧. ದೇವಗಂಧರ್ವರು = ಕಲ್ಪಾದಿಯಲ್ಲಿಯೇ ದೇವಲೋಕದಲ್ಲಿ ಜನಿಸಿದ ಗಂಧರ್ವರು.

೨. ಚಿರಲೋಕಲೋಕರಾದ ಪಿತೃಗಳು = ಚಿರಕಾಲಸ್ಥಾಯಿಯಾದ ಲೋಕವುಳ್ಳ ಪಿತೃಗಳು–ಎಂದು ಮಾತ್ರ ಭಾಷ್ಯಕಾರರು ಬರೆದಿದ್ದಾರೆ. ಪಿತೃಗಳಿಗೆ 'ಚಿರಲೋಕಲೋಕ' ಎಂಬ ವಿಶೇಷಣವನ್ನಿತ್ತುದಕ್ಕೆ ಸಾರ್ಥಕ್ಯವೇನೆಂಬುದು ವ್ಯಾಖ್ಯಾನಗಳಲ್ಲಿಯೂ ಸ್ಪಷ್ಟವಾಗಿಲ್ಲ. ನನಗೆ ತೋರುವುದು ಹೀಗೆ – ಇಲ್ಲಿ ಪಿತೃಗಳೆಂದರೆ ಶ್ರಾದ್ಧದಲ್ಲಿ ಬರುವ ಪಿತೃ, ಪಿತಾಮಹಾದಿ ಪಿತೃಗಳಲ್ಲ. ಜನ್ಮತಃ ಪಿತೃಲೋಕವಾಸಿಗಳಾದ ಅಗ್ನಿಷ್ವತ್ತ–ಮೊದಲಾದ ಪಿತೃಗಳು.

೩. ಆಜಾನಜ ದೇವರು = ಆಜಾನ = ದೇವಲೋಕ. ಕಲ್ಪಾದಿಯಲ್ಲಿಯೇ ದೇವಲೋಕದಲ್ಲಿ ಜನಿಸಿದ ದೇವತೆಗಳು.

೪. ಕರ್ಮದೇವಾಃ = ಅಗ್ನಿಹೋತ್ರಾದಿ ಕರ್ಮಗಳ ಆಚರಣೆಯಿಂದ ದೇವಲೋಕವನ್ನು ಪಡೆದು ದೇವತೆಗಳಾದವರು.

೫. ದೇವಾಃ = ದೇವತೆಗಳು.

೬. ಈ ಎಲ್ಲ ದೇವತೆಗಳ ಅಧಿಪತಿ ಇಂದ್ರ.

೭. ಬೃಹಸ್ಪತಿ = ದೇವತೆಗಳ ಆಚಾರ್ಯ.

೮. ಪ್ರಜಾಪತಿ = ವಿರಾಟ್, ತ್ರೈಲೋಕ್ಯ ಶರೀರ.

೯. ಬ್ರಹ್ಮಾ = ಸಮಷ್ಟಿವ್ಯಷ್ಟಿ ರೂಪ ಹಿರಣ್ಯಗರ್ಭ. ಈತನಲ್ಲಿ ಪೂರ್ವೋಕ್ತ ಶತಗುಣಿತ ಆನಂದಗಳೆಲ್ಲವೂ ನೆಲೆಸಿವೆ. ಇಂತಹ ಸರ್ವಾತಿಶಾಯಿಯಾದ ಆನಂದವು ಶ್ರೋತ್ರಿಯ ಅಕಾಮಹತನೂ ಆದ ಆತ್ಮಜ್ಞಾನಿಯಲ್ಲಿಯೂ ಇದೆಯೆಂಬುದು ಪ್ರತ್ಯಕ್ಷವಾಗಿದೆ. ಅಕಾಮಹತನಾದ ಶ್ರೋತ್ರಿಯನಿಗೂ ಈ ಆನಂದಗಳಿವೆಯೆಂದು ಹೇಳಲಾಗಿದೆಯಷ್ಟೆ. ಮನುಷ್ಯಗಂಧರ್ವಾದಿಗಳಲ್ಲಿ ಕ್ರಮವಾಗಿ ಆನಂದದ ಉತ್ಕರ್ಷ ಉಂಟು. ಆದರೆ ಒಬ್ಬನೇ ಶ್ರೋತ್ರಿಯನಲ್ಲಿ ಈ ಪ್ರಕಾರವಾದ ಉತ್ಕರ್ಷ ಹೇಗೆ ಸಂಭವಿಸುತ್ತದೆ? ಹೌದು; ಶ್ರೋತ್ರಿಯನಲ್ಲಿ ಅಕಾಮಹತತ್ವವು ಹೆಚ್ಚಿದಂತೆ–ಎಂದರೆ–ಆಸೆಯು ಕಡಿಮೆಯಾಗುತ್ತ ಹೋದಂತೆ ಆನಂದವು ಉತ್ಕರ್ಷಿಸುತ್ತದೆ ಎಂದು ತಿಳಿಯಬೇಕು. ಶ್ರೋತ್ರಿಯತ್ವ, ಪಾಪರಾಹಿತ್ಯ, ಕಾಮನಾತ್ಯಾಗ–ಇವು ಮೂರು ಆನಂದಪ್ರಾಪ್ತಿಗೆ ಕಾರಣಗಳು. ಸ ಏಕೋ ಬ್ರಹ್ಮಣ ಆನಂದಃ – ಎಂಬಲ್ಲಿ ಬ್ರಹ್ಮನೆಂದರೆ ಹಿರಣ್ಯಗರ್ಭನೆಂಬ ಬ್ರಹ್ಮ. ಪರಬ್ರಹ್ಮವಲ್ಲ. ಹಿರಣ್ಯಗರ್ಭ–ಪರ್ಯಂತವಾಗಿ ವರ್ಣಿಸಿದ ಆನಂದಗಳೆಲ್ಲವೂ ಪರಬ್ರಹ್ಮಾನಂದದ ಹನಿಗಳು.

ಹೀಗೆ ಆನಂದದ ಮೀಮಾಂಸೆಯನ್ನು ಮಾಡಿದ್ದರಿಂದ ಅದ್ವಿತೀಯವೂ ಸ್ವಾಭಾವಿಕವೂ ಆದ ಒಂದು ಪರಮಾನಂದವಿದೆಯೆಂದು ನಿರ್ಣಯಿಸಲಾಯಿತು. ಇದರ ಉಪಸಂಹಾರವೇನೆಂದರೆ –

**ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ ।**

ಹಿಂದೆ ಹೇಳಿದಂತೆ ಹೃದಯಗುಹೆಯಲ್ಲಿ ನೆಲೆಸಿ, ಆಕಾಶವೇ ಮೊದಲಾದವನ್ನು ಸೃಷ್ಟಿಸಿ, ಅನ್ನಮಯಾದಿ ಕೋಶಗಳನ್ನು ನಿರ್ಮಿಸಿಕೊಂಡು ಅನುಪ್ರವೇಶ ಮಾಡಿದನೋ, ಈ ಪುರುಷನಲ್ಲಿ ಇದ್ದಾನೋ ಆತನೂ ದೂರದ ಆದಿತ್ಯಮಂಡಲದಲ್ಲಿ ಇರತಕ್ಕವನೂ ಒಬ್ಬನೇ! ಅಕಾಮಹತನಾದ ಶ್ರೋತ್ರಿಯ ಜ್ಞಾನಿಗೆ ಪ್ರತ್ಯಕ್ಷನೂ ಯಾವ ಆನಂದಸಾಗರನ ಒಂದು ಹನಿಯನ್ನು ಕುಡಿದು ಹಿರಣ್ಯಗರ್ಭಬ್ರಹ್ಮನಿಂದ ಹಿಡಿದು ಸಕಲ ಪ್ರಾಣಿಗಳೂ ಆನಂದದಿಂದ ಹಿಗ್ಗುತ್ತಾರೋ ಆನಂದಾತ್ಮನಾದ ಆತನೇ ಜನರ ಹೃದಯದಲ್ಲಿದ್ದಾನೆ. ಆತನೇ ಆದಿತ್ಯಮಂಡಲದಲ್ಲಿಯೂ ಇದ್ದಾನೆ. ಹೀಗೆ ಸರ್ವತ್ರ ಇರುವ ಪರಮಾತ್ಮನು ಏಕನೇ ಆಗಿದ್ದಾನೆ. ಇದನ್ನರಿತ ಬ್ರಹ್ಮವಿದನು ಯಾವುದಕ್ಕೂ ಅಂಜದೆ ಸದಾ ನಿರ್ಭಯನಾಗಿರುತ್ತಾನೆ.

ಅನೇಕ ಜನ್ಮಗಳಲ್ಲಿ ಸಾಧನೆಗಳನ್ನು ಮಾಡಿ ಸಿದ್ಧನಾದ ಮಹಾಪುರುಷನು "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವನ್ನು ಪಡೆಯುತ್ತಾನೆ. ಆತನು ರಾಗದ್ವೇಷಾತ್ಮಕವಾದ ಸಂಸಾರಕ್ಕೆ ಕಾರಣವಾದ ಈ ಅನ್ನಮಯಕೋಶವನ್ನು ಪ್ರಾಣಮಯಕೋಶವನ್ನೂ ಸೇರಿ, ಮತ್ತೆ ಅದನ್ನು ತ್ಯಜಿಸಿ ಮನೋಮಯ, ವಿಜ್ಞಾನಮಯ ಕೋಶಗಳನ್ನು ದಾಟಿ ಆನಂದಮಯಕೋಶವನ್ನು ಸೇರುತ್ತಾನೆ– ಎಂದು ಮುಂದೆ ವರ್ಣನೆಯಿದೆ. ಮೊದಲು ಉಪಸಂಕ್ರಮಣ–ಹೋಗಿ ಸೇರುವುದು ಅನಂತರ ತ್ಯಜಿಸಿ ಮುಂದೆ ಹೋಗುವುದು–ಇದು ಕ್ರಮ. ಏವಂವಿತ್ = ಈ ರೀತಿಯಾಗಿ ಬ್ರಹ್ಮಾತ್ಮೈಕ್ಯವನ್ನು ತಿಳಿದ ಬ್ರಹ್ಮಜ್ಞಾನಿಯು ಉಪಸಂಕ್ರಮಿಸುತ್ತಾನೆ–ಎಂದು ವರ್ಣನೆ ಇದೆ. ಇಲ್ಲೊಂದು ಶಂಕೆ ಸಂಭವಿಸುತ್ತದೆ –

ಏವಂವಿತ್ = ಈ ಪ್ರಕಾರವಾಗಿ ತಿಳಿದು ಉಪಸಂಕ್ರಮಣ ಮಾಡತಕ್ಕವನು ಪರಮಾತ್ಮನೆ? ಅಥವಾ ಅನ್ಯನೆ? ಅನ್ಯನೆಂಬುದು ಸರಿಯಲ್ಲ. ಏಕಮೇವಾದ್ವಿತೀಯಮ್, ತತ್ತ್ವಮಸಿ–ಇತ್ಯಾದಿ ಶ್ರುತಿಗಳು ಪರಮಾತ್ಮನಿಗಿಂತ ಇನ್ನೊಬ್ಬನಿಲ್ಲವೇ ಇಲ್ಲ ಎಂದು ಹೇಳುತ್ತವೆ. ಹಾಗಾದರೆ ಪರಮಾತ್ಮನೇ ಉಪಸಂಕ್ರಮಣ ಕರ್ತನೆನ್ನೋಣ. ಅದು ಕೂಡುವುದಿಲ್ಲ. ಮುಂದೆ

ಆನಂದಮಯಮಾತ್ಮಾನಮುಪಸಂಕ್ರಮ್ಯ ಎಂದು ಶ್ರುತಿಯು ಹೇಳಿದೆ. ಆನಂದಮಯಾತ್ಮನಾದ ಜೀವನು ತಾನೇ ಆಗಿರುವಾಗ, ತನ್ನನ್ನು ತಾನೇ ಪ್ರವೇಶಿಸಿದನೆಂಬುದು ಅಸಂಗತವಾಗುತ್ತದೆ. ಆದ್ದರಿಂದ ಇದಕ್ಕೆ ಸಮಾಧಾನವೇನು?

ಏವಂವಿತ್ = ಹೀಗೆ ತಿಳಿದ ಜ್ಞಾನಿಯು ಪರಮಾತ್ಮನೇ ಆಗಿರುವುದರಿಂದ ಅವನೇ ಉಪಸಂಕ್ರಮಣ ಮಾಡತಕ್ಕವನು ಎಂಬುದೇ ಸರಿ. ಪರಮಾತ್ಮನಿಗೂ ಜೀವಾತ್ಮನಿಗೂ ಪರಮಾರ್ಥವಾಗಿ ಭೇದವಿಲ್ಲದಿದ್ದರೂ ಉಪಾಧಿನಿಮಿತ್ತಕವಾದ ಭೇದ ಉಂಟು. **ಕಾರ್ಯೋಪಾಧಿರಯಂಜೀವಃ ಕಾರಣೋಪಾಧಿರೀಶ್ವರಃ** – ಎಂದು ಶ್ರುತಿ ಇದೆ. "ಅವಿದ್ಯಾಕಾರ್ಯವಾದ ಅಂತಃಕರಣ(ಬುದ್ಧಿ)ದಿಂದ ಉಪಹಿತನಾದ ಜೀವಾತ್ಮನು ಜೀವನಾಗಿದ್ದಾನೆ. ಅಂತಃಕರಣಕ್ಕೆ ಕಾರಣವಾದ ಅವಿದ್ಯೆಯಿಂದ ಉಪಹಿತನಾದ ಜೀವಾತ್ಮನೇ ಪರಮಾತ್ಮನೆನಿಸಿದ್ದಾನೆ."

ಜ್ಞಾನಿಯಾದವನು ಪರಮಾತ್ಮನೇ ಆಗಿರುವುದರಿಂದ, ಅವನು ಅನ್ನಮಯಾದಿಕೋಶಗಳಿಗೆ ಹೋಗುವುದೂ ಇಲ್ಲ, ಹೊರಡುವುದೂ ಇಲ್ಲ. ಉಪಸಂಕ್ರಮಣವು ಜ್ಞಾನರೂಪವಾದದ್ದು. ಅನ್ನಮಯಾದಿಕೋಶಗಳು 'ನಾನಲ್ಲ, ನಾನಲ್ಲ' ಎಂದು ತಳ್ಳಿಹಾಕಿ, ಆನಂದಮಯಕೋಶಕ್ಕೆ ಬರುತ್ತಾನೆ. ಅಲ್ಲಿರುವ ಆತ್ಮನೇ ನಾನು ಎಂದು ಭಾವಿಸುತ್ತಾನೆ–ಎಂದು ತಾತ್ಪರ್ಯ. ಪರಮಾತ್ಮನು ತಾನೆಂದು ತಿಳಿದ ಜ್ಞಾನಿಯು ಆನಂದಮಯಕೋಶದಲ್ಲಿರುವ ಆತ್ಮನು ನಾನೇ, ಉಪಾಧಿಯಾದ ಅಂತಃಕರಣವು ಅವಿದ್ಯಾಕಲ್ಪಿತ ಎಂದು ತಿಳಿಯುತ್ತಾನೆ. ಇದು ಉಪಸಂಕ್ರಮಣದ ಅರ್ಥ. ಜ್ಞಾನಿಯು ಹೃದಯಗುಹೆಯಲ್ಲಿ ನಿಹಿತನಾದವನು ನಾನು ಎಂದು ನಿಶ್ಚಯಿಸುತ್ತಾನೆ. ಬ್ರಹ್ಮವಿದಾಪ್ನೋತಿ ಪರಮ್–ಎಂಬಂತೆ ಇನ್ನೊಂದು ಬಗೆಯ ವಾಕ್ಯರಚನೆ ಇಲ್ಲಿದೆ. ವಿದ್ಯೆಯಿಂದ (ಜ್ಞಾನದಿಂದ) ಅವಿದ್ಯೆಯ ಅಪೋಹ(ತ್ಯಾಗ), ಅವಿದ್ಯೆಯ ಅಪೋಹದಿಂದ ಅನ್ನಮಯಾದಿಗಳ ಅಪೋಹವೆಂದು ತಿಳಿಯಬೇಕು. ಏಕೆಂದರೆ, ಜ್ಞಾನವು ಅಜ್ಞಾನವನ್ನು ಮಾತ್ರ ನಿವರ್ತಿಸುತ್ತದೆ.

'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿಯೂ ಸಹ ದೇಹದಲ್ಲಿರುವ ಆತ್ಮನು ಪರಮಾತ್ಮನೇ ಎಂದು ತೋರಿಸಿಕೊಟ್ಟಿದೆ. ಮತ್ತು 'ಏವಂವಿತ್' ಆದವನು "ಅಭಯಂ ಪ್ರತಿಷ್ಠಾಂ ವಿಂದತೇ" ಎಂದು ಉಪನಿಷತ್ತು ಹೇಳಿದೆ. ಭಯಕ್ಕೆ ಕಾರಣವಾದದ್ದು ದ್ವಿತೀಯವಸ್ತು. ಪರಮೇಶ್ವರನೊಬ್ಬನೇ ನಿರ್ಭಯನಾಗಿರತಕ್ಕವನು. ಜ್ಞಾನಿಯು ಪರಮೇಶ್ವರನಾದ್ದರಿಂದಲೇ ಅವನು ನಿರ್ಭಯನೆಂಬುದು ಹೊಂದುತ್ತದೆ. ಆದ್ದರಿಂದ ದ್ವೈತವು ಮಿಥ್ಯೆಯೇ ಸರಿ. ರಾಜ, ಕಳ್ಳ–ಮುಂತಾದವರಿಂದ ಭಯವಾಗುತ್ತದೆಯೆಂಬುದೂ ಸರಿಯಲ್ಲ. ರಾಜಾದಿಗಳ

ಅಸ್ತಿತ್ವವು ಅವಿದ್ಯಾಸ್ಥಿತಿಯಲ್ಲಿ ಮಾತ್ರ. ಅವಿದ್ಯಾಕಲ್ಪಿತರಾದ ರಾಜಾದಿಗಳಿಂದ ಜ್ಞಾನಿಗೆ ಭಯವಿಲ್ಲ.

ಹಾಗಾದರೆ ಜ್ಞಾನಿಯು ಲೋಕವ್ಯವಹಾರವನ್ನು ಹೇಗೆ ನಡೆಸುತ್ತಾನೆ? ಶಾಸ್ತ್ರೋಕ್ತವಿಧಿಗಳನ್ನು ಹೇಗೆ ಆಚರಿಸುತ್ತಾನೆ? ಆದ್ದರಿಂದ ದ್ವಿತೀಯವಸ್ತು ಮಾಯಿಕವಾದರೂ ಕಾಣಿಸುತ್ತದೆಯೆಂದೂ ಅದರಿಂದ ಜ್ಞಾನಿಗೂ ಭಯವು ಆಗುವುದೆಂದೂ ಒಪ್ಪಬೇಕಾಗುತ್ತದೆಯಲ್ಲವೆ?

ಹಾಗಲ್ಲ; ಲೋಕಸಂಗ್ರಹಕ್ಕಾಗಿ ಆತ್ಮಜ್ಞಾನಿಯೂ ವ್ಯವಹಾರದಲ್ಲಿ ತೊಡಗುತ್ತಾನೆ. ಕಲ್ಯಾಣವನ್ನು ಬಯಸತಕ್ಕ ಜನರಿಗೆ ಕಲ್ಯಾಣದ ಮಾರ್ಗವನ್ನು ತೋರಿಸುತ್ತಾನೆ. ಹೃದಯದಲ್ಲಿ ಅವನಿಗೆ ಭಯರಾಗದ್ವೇಷಗಳೂ ಇರುವುದಿಲ್ಲ.

**ಕೃಷ್ಣೋ ಭೋಗೀ ಶುಕಸ್ತ್ಯಾಗೀ ನೃಪೌ ಜನಕರಾಘವೌ ।**
**ವಸಿಷ್ಠಃ ಕರ್ಮನಿರತಃ ಸರ್ವೇ ತೇ ಜ್ಞಾನಿನಃ ಸ್ಮೃತಾಃ ॥** ಎಂಬ ವಚನವನ್ನಿಲ್ಲಿ ಸ್ಮರಿಸಿಕೊಳ್ಳಬೇಕು.

ಅವಿದ್ಯೆ ಇರುವವರೆಗೆ ದ್ವೈತವು ಗೋಚರಿಸುತ್ತದೆ. ಜಗತ್ತಿನಲ್ಲಿ ಇಂದ್ರಿಯಗಳೂ ಮನಸ್ಸೂ ಜಾಗೃತವಾಗಿರುವುದರಿಂದ ಎಲ್ಲ ದ್ವೈತಗಳೂ ಗೋಚರಿಸುತ್ತವೆ. ಸ್ವಪ್ನದಲ್ಲಿ ಮನಸ್ಸು ಮಾತ್ರ ಜಾಗೃತವಾಗಿದ್ದು ದ್ವೈತವನ್ನು ಸ್ವೇಚ್ಛೆಯಾಗಿ ಕಲ್ಪಿಸಿಕೊಳ್ಳುತ್ತದೆ. ಸುಷುಪ್ತಿಯಲ್ಲಿ ಅವಿದ್ಯೆಯಿದ್ದರೂ ದ್ವೈತವು ತೋರುವುದಿಲ್ಲ. ಏಕೆಂದರೆ, ಆಗ ಇಂದ್ರಿಯಮನಸ್ಸುಗಳೆರಡೂ ನಿಷ್ಕ್ರಿಯವಾಗಿರುತ್ತವೆ. ಅವು ಸಕ್ರಿಯವಾದರೂ ಅದ್ವೈತಾತ್ಮನು ಗೋಚರಿಸುವುದಿಲ್ಲ. 'ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ' ಎಂದು ಶ್ರುತಿಯೇ ಹೇಳಿದೆ. ಆದ್ದರಿಂದ ಸುಷುಪ್ತಿಯಲ್ಲಿ ಗೋಚರಿಸದಿರುವುದು ಸ್ವಾಭಾವಿಕ. ಆತ್ಮನು ಸ್ವಯಂಪ್ರಕಾಶನಾದರೂ ಮೋಡವು ಸೂರ್ಯನನ್ನು ಮರೆಮಾಡುವಂತೆ, ಅವಿದ್ಯೆಯು ಆತ್ಮನನ್ನು ಮರೆಮಾಡಿಬಿಡುತ್ತದೆ. ಅವಿದ್ಯೆ ಇರುವವರೆಗೆ ಅದ್ವೈತನೂ ಆನಂದಸ್ವರೂಪನೂ ಆದ ಆತ್ಮನ ದರ್ಶನವಿಲ್ಲ.

ಒಟ್ಟಿನಲ್ಲಿ ಅನ್ನಮಯಕೋಶದಿಂದ ಹಿಡಿದು ಆನಂದಮಯಕೋಶ–ಪರ್ಯಂತವಾದ ಯಾವ ಕೋಶವೂ ನಾನಲ್ಲ, ಅವುಗಳಿಗೆ ಅತಿರಿಕ್ತನಾದ ಆನಂದಾತ್ಮನೇ ನಾನು ಎಂಬ ಜ್ಞಾನಮಾತ್ರವೇ ಈ ಆನಂದವಲ್ಲಿಯಲ್ಲಿ ಹೇಳಿರುವ ಸಂಕ್ರಮಣವೆಂದು ತಿಳಿಯತಕ್ಕದ್ದು. ತದಪ್ಯೇಷ ಶ್ಲೋಕೋ ಭವತಿ = ಈ ಆನಂದವಲ್ಲಿಯಲ್ಲಿ ಹೇಳಿದ ವಿಷಯವನ್ನು ಸಂಗ್ರಹವಾಗಿ ತಿಳಿಸುವುದಕ್ಕೋಸ್ಕರ ಮುಂದಿನ ಮಂತ್ರವು ಪ್ರವೃತ್ತವಾಗಿದೆ.

# ನವಮಾನುವಾಕ

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ । ಏತಗ್ಂ ಹ ವಾ ವ ನ ತಪತಿ । ಕಿಮಹಗ್ಂ ಸಾಧು ನಾಕರವಮ್ । ಕಿಮಹಂ ಪಾಪಮಕರವಮಿತಿ । ಸ ಯ ಏವಂ ವಿದ್ವಾನೇತೇ ಆತ್ಮಾನಗ್ಂ ಸ್ಪೃಣುತೇ । ಯ ಏವಂ ವೇದ । ಇತ್ಯುಪನಿಷತ್ ॥**

ಅದೃಶ್ಯೇಽನಾತ್ಮ್ಯೇ ಇತ್ಯಾದಿ ಶ್ರುತಿಯಂತೆ ನಿರ್ವಿಕಲ್ಪವೂ ಸತ್ಯಜ್ಞಾನಾನಂತವೂ ಆದ ಬ್ರಹ್ಮವನ್ನು ಮನಸ್ಸಿನಿಂದಲೂ ಮುಟ್ಟಲಾರದೆ ಜನರ ವಾಕ್ಕುಗಳು ಕುಂಠಿತವಾಗಿ ಹಿಂದಿರುಗುತ್ತವೆ. ಲೋಕದಲ್ಲಿ ಜನರು ಶಬ್ದವನ್ನು ಪ್ರಯೋಗಿಸುವಾಗ ಮನಸ್ಸು ತನ್ನ ಜ್ಞಾನವ್ಯಾಪಾರದಿಂದ ಒಂದು ವಸ್ತುವಿನ ಸ್ವರೂಪವನ್ನು ಗುರುತಿಸುತ್ತದೆ. ಅನಂತರ ಆ ವಸ್ತುವನ್ನು ಬೋಧಿಸಲು ಜನರು ವಾಚಕಶಬ್ದಗಳನ್ನು ಪ್ರಯೋಗಿಸುತ್ತಾರೆ. 'ಲೇಖನಿಯನ್ನು ಕೊಡು' ಎಂಬ ವಾಕ್ಯವನ್ನು ಪ್ರಯೋಗಿಸುವುದಕ್ಕೆ ಮೊದಲು, ಲೇಖನಿಯೆಂದರೆ ಏನು? ಅದು ಹೇಗಿರುತ್ತದೆ?-ಎಂಬುದನ್ನು ಬುದ್ಧಿಯು ತಿಳಿದಿರಬೇಕು. ಕೊಡು ಎಂಬುದರ ಅರ್ಥವನ್ನು ತಿಳಿದಿರಬೇಕು. ಹಾಗೆಯೇ 'ಲೇಖನಿಯನ್ನು ಕೊಡು' ಎಂಬ ವಾಕ್ಯವು ನಮಗೆ ಬೇಕಾದ ವಿಷಯವನ್ನು ತಿಳಿಸಿಕೊಡುತ್ತದೆ ಎಂದೂ ನಮಗೆ ಗೊತ್ತಿರಬೇಕು. ಆಗ ಅಂತಹ ವಾಕ್ಯವನ್ನು ನಾವು ಹೇಳುತ್ತೇವೆ. ಆದರೆ ಬ್ರಹ್ಮವೆಂದರೇನು? ಅದರ ಸ್ವರೂಪ ಎಂತಹುದು?-ಎಂಬುದನ್ನು ನಮ್ಮ ಮನೋವ್ಯಾಪಾರದ ಬುದ್ಧಿಯು ತಿಳಿಯಲಾರದೆ ಹೋಗಿದೆ. ಬ್ರಹ್ಮದ ಸ್ವರೂಪವೇ ಗೊತ್ತಿಲ್ಲದೆ ಹೋದಾಗ ಯಾವ ಶಬ್ದದಿಂದ ಅದನ್ನು ತಿಳಿಸಿಕೊಡಬೇಕು? ಆದ್ದರಿಂದ ಮನಸ್ಸಿನ ಜೊತೆಗೆ ಹೋದ ಶಬ್ದಗಳು ಬ್ರಹ್ಮವನ್ನು ವರ್ಣಿಸಲಾರದೆ ಸೋತು ಹಿಂದಿರುಗಿ ಬಿಡುತ್ತವೆ. ಮನಸ್ಸೂ ವಾಕ್ಕೂ ಅದನ್ನು ಪ್ರಕಾಶಿಸಲಾರವು ಎಂದಾಗ, ಬ್ರಹ್ಮವು ಸ್ವಯಂ ಪ್ರಕಾಶವೆಂದೇ ಹೇಳಿದಂತಾಯಿತು.

ಹಾಗಾದರೆ "ಸತ್ಯಂಜ್ಞಾನಮನಂತಂ ಬ್ರಹ್ಮ" ಎಂದು ಶ್ರುತಿಯೇ ಬ್ರಹ್ಮವನ್ನು ವರ್ಣಿಸಿದೆಯಲ್ಲ? ಅದಕ್ಕೆ ಇದು ವಿರುದ್ಧವಾಗುವುದಿಲ್ಲವೆ? ಎಂದರೆ, ಹಾಗಲ್ಲ. ಶಬ್ದದಿಂದ ನೇರವಾಗಿ ಘಟ, ಪಟ, ಗೃಹ, ಲೇಖನಿ-ಮೊದಲಾದವನ್ನು ಅಭಿಧಾ ವೃತ್ತಿಯಿಂದ ಬೋಧಿಸುವಂತೆ ಬ್ರಹ್ಮವನ್ನು ತಿಳಿಸಿಕೊಡಲಾಗುವುದಿಲ್ಲ. ಏಕೆಂದರೆ, ಬ್ರಹ್ಮದಲ್ಲಿ ಘಟತ್ವ, ಪಟತ್ವ-ಮುಂತಾದ ಜಾತಿಯಾಗಲಿ ಆಕೃತಿವಿಶೇಷವಾಗಲಿ ಗುಣವಾಗಲಿ ಕ್ರಿಯೆಯಾಗಲಿ ಇಲ್ಲ. ಅವುಗಳಲ್ಲೊಂದಾದರೂ ಇದ್ದರೆ ಶಬ್ದವು

ಬೋಧಿಸೀತು. "ಸತ್ಯಂಜ್ಞಾನಮನಂತಂ ಬ್ರಹ್ಮ" ಎಂಬುದು ಬ್ರಹ್ಮದ ಸ್ವರೂಪಲಕ್ಷಣ. ಅದೂ ಸಹ ಲಕ್ಷಣಾವೃತ್ತಿಯಿಂದ ಬ್ರಹ್ಮದ ಕಡೆಗೆ ಕೈತೋರಿಸಿ ಸುಮ್ಮನಾಗಿದೆ.

ಇಂತಹ ಬ್ರಹ್ಮಾನಂದವನ್ನು ಬಲ್ಲವನು ಯಾವಾಗಲೂ ಹೆದರುವುದೇ ಇಲ್ಲ. ಹೆದರಲು ನಿಮಿತ್ತವಾದ ದ್ವಿತೀಯ ವಸ್ತುವೇ ಇರುವುದಿಲ್ಲ. ಈ ಆನಂದವು ಅಕಾಮಹತನಾದ ಶ್ರೋತ್ರಿಯನಿಗೆ ಲಭ್ಯವಾದದ್ದು. ಅವನ ಆತ್ಮವೇ ಆದದ್ದು. ವಿಷಯ ವಿಷಯಭಾವ ಸಂಬಂಧವಿಲ್ಲದೆ ಸ್ವಾಭಾವಿಕವಾದದ್ದು.

ಉಪನಿಷತ್ತಿನಲ್ಲಿ 'ಆನಂದಂ ಬ್ರಹ್ಮಣೋ ವಿದ್ವಾನ್' ಎಂದು ಹೇಳಿದೆ. ಬ್ರಹ್ಮವೇ ಆನಂದವೆಂದು ನಿಶ್ಚಯಿಸಿರುವಾಗ, ಬ್ರಹ್ಮದ ಆನಂದವೆಂದು ಹೇಳುವುದು ಹೇಗೆ? ಬ್ರಹ್ಮ ಮತ್ತು ಆನಂದಗಳಿಗೆ ಭೇದವಿಲ್ಲವಷ್ಟೆ? ಹೌದು; ರಾಹೋಃಶಿರಃ – ರಾಹುವಿನ ಶಿರಸ್ಸು ಎಂಬಂತೆ ಈ ಪ್ರಯೋಗ ಬಂದಿದೆ.

ಪುರಾಣದ ಪ್ರಕಾರ ಅಮೃತಮಥನ ಕಾಲದಲ್ಲಿ ಒಬ್ಬ ರಾಕ್ಷಸನು ಮೋಸದಿಂದ ಅಮೃತವನ್ನು ಕುಡಿದಾಗ, ವಿಷ್ಣುವು ತನ್ನ ಚಕ್ರದಿಂದ ರಾಕ್ಷಸನ ತಲೆಯನ್ನು ಕತ್ತರಿಸಿದನು. ತಲೆಯು ರಾಹುವಾಯಿತು. ದೇಹವು ಕೇತುವಾಯಿತು. ರಾಹುವೇ ಶಿರಸ್ಸಾಗಿರುವಾಗ ರಾಹುವಿನ ಶಿರಸ್ಸು ಎಂಬ ಪ್ರಯೋಗವು ಕಂಡು ಬರುತ್ತದೆ. ಇಂತಹ ಸ್ಥಳದಲ್ಲಿ ಅವಸ್ಥಾಭೇದದಿಂದ ಒಂದೇ ವಸ್ತುವಿನಲ್ಲಿಯೂ ಭೇದವನ್ನು ಕಲ್ಪಿಸಿಕೊಳ್ಳಬೇಕು. ವಸ್ತುವಿನಲ್ಲಿ ಭೇದವಿಲ್ಲದಿದ್ದರೂ ಕಲ್ಪಿತಭೇದದಿಂದ ಷಷ್ಠೀವಿಭಕ್ತಿ ಬರುತ್ತದೆ. ರಾಹುವಿನ ಶಿರಸ್ಸು ಎಂಬಲ್ಲಿ– ಪುರಾಣದಲ್ಲಿ ವರ್ಣಿತನಾದ ಆ ರಾಹುವಿನ ಈ ಶಿರಸ್ಸು ಎಂದು ಅರ್ಥ. ಕಾಲಭೇದದಿಂದ ಅವಸ್ಥಾಭೇದವನ್ನಿಲ್ಲಿ ಹೇಳಬೇಕು. ಉದಾಹರಣೆಗಳಲ್ಲಿ ಸ್ವಲ್ಪಭೇದವಿದ್ದರೂ ಈ ಬಗೆಯ ಪ್ರಯೋಗಗಳು ಇನ್ನೂ ಇವೆ. "ವಾಕ್ಯದ ಶಬ್ದಗಳು, ಬೆಲ್ಲದ ಮುದ್ದೆ, ಚಿನ್ನದ ಬಳೆ, ಕಲ್ಲಿನ ಪ್ರತಿಮೆ"–ಇತ್ಯಾದಿ.

ಪ್ರಕೃತದಲ್ಲಿ ಈ ರೀತಿ ಕಲ್ಪಿಸಿಕೊಳ್ಳಬಹುದು: ಆನಂದವಲ್ಲಿಯ ಅಧ್ಯಯನಕ್ಕೆ ಪೂರ್ವದಲ್ಲಿ ವಿದಿತವಾದ ಬ್ರಹ್ಮ. ಅಧ್ಯಯನವಾದ ಮೇಲೆ ವಿದಿತವಾದ ಆನಂದಸ್ವರೂಪವಾದ ಬ್ರಹ್ಮ. ಇದು ಕಲ್ಪಿತಭೇದ.

ದೂರದಲ್ಲಿದ್ದಾಗ ಕಾಣಿಸಿದ ಹಗ್ಗದ ಹಾವು ಹತ್ತಿರ ಹೋದಾಗ ಇಲ್ಲದೇಹೋಗುವಂತೆ ಅಜ್ಞಾನಾವಸ್ಥೆಯಲ್ಲಿ ಕಾಣಿಸಿದ ಭಯಕಾರಣವು ಜ್ಞಾನಾವಸ್ಥೆಯಲ್ಲಿ ಇಲ್ಲವಾಗುತ್ತದೆ. ಈ ಆತ್ಮಜ್ಞಾನಿಗೆ ಪುಣ್ಯಪಾಪಕರ್ಮಗಳ ಸಂಬಂಧವೂ ತಪ್ಪಿಹೋಗುವುದು. ಮರಣಕಾಲವು ಸಮೀಪಿಸಿದಾಗ 'ನಾನು ಈ

ಪುಣ್ಯಕಾರ್ಯವನ್ನೇಕೆ ಆಚರಿಸಲಿಲ್ಲ' ಎಂಬ ಚಿಂತೆಯೂ ಇವನಿಗಿರುವುದಿಲ್ಲ. 'ಅಯ್ಯೋ, ನಾನೇಕೆ ಅಂತಹ ಪಾಪಕರ್ಮವನ್ನಾಚರಿಸಿದೆ' ಎಂಬ ದುಃಖವೂ ಇವನನ್ನು ಬಾಧಿಸುವುದಿಲ್ಲ. ಏಕೆಂದರೆ, ಅದ್ವೈತಾನಂದಸ್ವರೂಪನಾದ ಬ್ರಹ್ಮವಿದನು ಪುಣ್ಯಪಾಪಗಳನ್ನು ಆತ್ಮಸ್ವರೂಪವಾಗಿಯೇ ಕಾಣುವುದರಿಂದ ಅವು ಯಾವಫಲವನ್ನು ಕೊಡಲಾರದೆ ನಿರ್ವೀರ್ಯವಾಗಿ ಬಿಡುತ್ತವೆ. ಫಲಭೋಗಕ್ಕಾಗಿ ಕರ್ತನಿಗೆ ಇನ್ನೊಂದು ಜನ್ಮವನ್ನು ತರಲು ಶಕ್ತಿಯಿಲ್ಲದೆ ನಶಿಸಿಹೋಗುತ್ತವೆ. ಈ ವಿಷಯವನ್ನೇ ಮುಂದಿನ ಎರಡು ಶ್ರುತಿವಾಕ್ಯಗಳು ತಿಳಿಸುತ್ತವೆ.

**೧. ಸ ಏವಂ ವಿದ್ವಾನೇತೇ ಆತ್ಮಾನಗ್ಂ ಸ್ಪೃಣುತೇ ।**

ನಾನು ಸತ್ಯಜ್ಞಾನಾನಂದಸ್ವರೂಪನಾದ ಆತ್ಮ. ಪುಣ್ಯಪಾಪಗಳಿಗೆ ನಾನು ಕರ್ತನಲ್ಲವೆಂದು ಏತೇ = ಈ ಪುಣ್ಯಪಾಗಳೆರಡನ್ನು ಯಾವನು ತಿಳಿದಿರುತ್ತಾನೋ ಆ ಜ್ಞಾನಿಯು, ಆತ್ಮಾನಂ = ತನ್ನ ಆತ್ಮವನ್ನು, ಸ್ಪೃಣುತೇ = ಸಂತೋಷಪಡಿಸುತ್ತಾನೆ. ಅಥವಾ ಬಲವತ್ತರವನ್ನಾಗಿ ಮಾಡುತ್ತಾನೆ.

**೨. ಉಭೇ ಹ್ಯೇವೈಷ ಏತೇ ಆತ್ಮಾನಗ್ಂ ಸ್ಪೃಣುತೇ ।**

ಹಿ = ಏಕೆಂದರೆ, ಉಭೇ ಏತೇ = ಈ ಎರಡು ಪುಣ್ಯಪಾಪಕರ್ಮಗಳೇ ಏಷ ಏವ = ಈ ಜ್ಞಾನಿಯೇ ಆಗಿದ್ದಾನೆ. ಆದ್ದರಿಂದ ಇವನು ತನ್ನ ಆತ್ಮವನ್ನು ಬಲವತ್ತರವನ್ನಾಗಿ ಮಾಡಿಕೊಳ್ಳುತ್ತಾನೆ.

ನಾನು ಪುಣ್ಯಕಾರ್ಯವನ್ನೇಕೆ ಮಾಡದೆಹೋದೆ? ನಾನು ಪಾಪಕಾರ್ಯವನ್ನೇಕೆ ಮಾಡಿಬಿಟ್ಟೆ–ಎಂಬ ಎರಡು ಚಿಂತೆಗಳು ಮನುಷ್ಯನನ್ನು ಸಾಯುವ ಕಾಲದಲ್ಲಿ ಕಾಡುತ್ತವೆ. ಜ್ಞಾನಾಗ್ನಿಯು ಆತ್ಮಜ್ಞಾನಿಯ ಈ ಪುಣ್ಯಪಾಪಗಳನ್ನು ಸುಟ್ಟುಹಾಕಿರುವುದರಿಂದ ಅವುಗಳ ಚಿಂತೆಯೇ ಜ್ಞಾನಿಗಿರುವುದಿಲ್ಲ. ಮತ್ತು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯಂತೆ ಪುಣ್ಯಪಾಪಗಳೂ ಈತನ ಸ್ವರೂಪವೇ ಆಗಿಬಿಟ್ಟಿರುತ್ತವೆ. ಆತ್ಮನ ದೃಷ್ಟಿಯಲ್ಲಿ ಇವು ಇರುವುದೇ ಇಲ್ಲ. ಪುಣ್ಯಪಾಪಗಳೇನಿದ್ದರೂ ಚಿತ್ತಕ್ಕೆ ಫಲವನ್ನು ಕೊಡತಕ್ಕವು. ಚಿತ್ತವು ಅವಿದ್ಯಾಕಲ್ಪಿತವಾದ್ದರಿಂದ ಜ್ಞಾನಿಯ ಚಿತ್ತವೂ ಅವಿದ್ಯೆಯಲ್ಲಿ ಸೇರಿಹೋಗಿರುತ್ತದೆ. ಹೀಗೆ ನಿರಂಜನನಾದ ಆತ್ಮನು ಹಿಂದಿನ ದೌರ್ಬಲ್ಯವನ್ನು ಕಳೆದುಕೊಂಡದ್ದರಿಂದ ಪ್ರಬಲನಾದಂತಾಯಿತು. ಆತ್ಮಾನಂದವು ಅಧಿಕಪ್ರಕಾಶವನ್ನು ಹೊಂದಿದ್ದರಿಂದ ಆತ್ಮನನ್ನು ಸಂತೋಷಪಡಿಸಿದಂತಾಯಿತು.

ಇತರ ಯಾವ ವಿದ್ಯೆಗಳೂ ತಿಳಿಸಲಾರದ ಪರಮರಹಸ್ಯವನ್ನು ತಿಳಿಸಿರುವ ಆನಂದವಲ್ಲಿಯೆಂಬ ಉಪನಿಷತ್ತು ಇದು.

*****

# ೩.ಭೃಗುವಲ್ಲೀ

**ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ॥**

**ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಸ್ಮಾ ಏತತ್ ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ । ತಗ್ಂ ಹೋ ವಾಚ । ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥೧॥**

ಪರಬ್ರಹ್ಮವು ಆಕಾಶಾದಿ ಪಂಚಭೂತಗಳನ್ನೂ ಅನ್ನಮಯಾದಿ ಕೋಶಗಳನ್ನೂ ನಿರ್ಮಿಸಿ, ಅದರೊಳಗೆ ಅನುಪ್ರವೇಶಿಸಿ ಜೀವಭಾವದಿಂದ ಸಾಂಸಾರಿಕ ಧರ್ಮವನ್ನು ನಿರ್ವಹಿಸುತ್ತಿರುವಂತೆ ತೋರಿಸಿಕೊಳ್ಳುತ್ತಿದೆ. ಆದ್ದರಿಂದ ವಿವೇಕಿಯು ಸರ್ವಕಾರ್ಯಲಕ್ಷಣವೂ ಸಂಸಾರದ ಸ್ಪರ್ಶಲೇಶವೂ ಇಲ್ಲದ ಆನಂದಸ್ವರೂಪನೇ ನಾನೆಂದು ತಿಳಿಯಬೇಕು. ಆತ್ಮನು ಜೀವಭಾವದಿಂದ ಅನುಪ್ರವೇಶಿಸಿದನು–ಎಂಬುದರ ತಾತ್ಪರ್ಯವೇ ಇದು. 'ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' (ಛಾಂ. ೬–೪–೨). ಈ ರೀತಿಯಲ್ಲಿ ತಿಳಿದ ಆತ್ಮಜ್ಞಾನಿಗೆ ಪುನರ್ಜನ್ಮವಿಲ್ಲ. ಅವನು ಮಾಡಿದ ಪುಣ್ಯಾಪಾಪಗಳೂ ದಗ್ಧವಾಗಿ ಹೋಗುವುದರಿಂದ ಪುನರ್ಜನ್ಮಕ್ಕೆ ಕಾರಣವೇ ಇರುವುದಿಲ್ಲ–ಇಷ್ಟು ಬ್ರಹ್ಮವಲ್ಲಿಯಲ್ಲಿ ಪ್ರತಿಪಾದಿತವಾದ ಬ್ರಹ್ಮವಿದ್ಯೆ. ಈ ವಿದ್ಯೆಗೆ ಸಾಧನವಾದ ತಪಸ್ಸನ್ನೂ ಕೆಲವು ಉಪಾಸನೆಗಳನ್ನೂ ತಿಳಿಸಲು ಭೃಗುವಲ್ಲಿಯು ತೊಡಗಿದೆ.

ವರುಣನ ಪುತ್ರನಾದ ಭೃಗುವು ಲೌಕಿಕವಿಷಯಸುಖದಲ್ಲಿ ವಿರಕ್ತನಾಗಿ ಮೋಕ್ಷಾರ್ಥಿಯಾಗಿದ್ದನು. ಬ್ರಹ್ಮಜ್ಞಾನದಿಂದಲೇ ಮೋಕ್ಷವಾಗುತ್ತದೆಯೆಂದೂ ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲವೆಂದೂ ತಿಳಿದಿದ್ದ ಆತನು ಬ್ರಹ್ಮಸ್ವರೂಪ-ವನ್ನರಿಯುವದಕ್ಕಾಗಿ ತಂದೆಯಾದ ವರುಣನ ಬಳಿಗೆ ಬಂದನು. ವಿನಯದಿಂದ ತಂದೆಗೆ ನಮಸ್ಕರಿಸಿ 'ಅಧೀಹಿ ಭಗವೋ ಬ್ರಹ್ಮ' ಎಂದು ಪ್ರಾರ್ಥಿಸಿದನು. "ಹೇ ಭಗವನ್, ಬ್ರಹ್ಮಸ್ವರೂಪವನ್ನು ತಿಳಿಸು" ಎಂದು ಅದರ ಅರ್ಥ. ಭಗವಚ್ಛಬ್ದವು ಮತುಪ್‌ಪ್ರತ್ಯಯಾಂತ. 'ಮತುವಸೋ ರು ಸಂಬುದ್ಧೌ ಛಂದಸಿ' (೮–೩–೧) ಎಂಬ ಪಾಣಿನಿ ಸೂತ್ರದಿಂದ ರುತ್ವವೂ, ಅದಕ್ಕೆ 'ಹಶಿ ಚ' (೬–೧–೧೧೪) ಎಂಬ

ಸೂತ್ರದಿಂದ ಉತ್ವವೂ ಬಂದು ಗುಣವಾಗಿ 'ಭಗವೋ' ಎಂಬ ರೂಪವಾಗಿದೆ. ಅಧೀಹಿ ಎಂದರೆ ಅಧ್ಯಾಪಯ ಎಂದರ್ಥ. ಇಙ್ ಅಧ್ಯಯನೇ ಎಂಬ ಧಾತುವಿನ ಛಾಂದಸ ರೂಪ. ಆದ್ದರಿಂದ ಪ್ರೇರಣಾರ್ಥವಿದ್ದರೂ ಣಿಚ್ ಪ್ರತ್ಯಯ ಬಂದಿಲ್ಲ. ಪರಸ್ಮೈ ಪದ ಬಂದಿದೆ.

ಆಗ ವರುಣನು ಬ್ರಹ್ಮಪ್ರಾಪ್ತಿಯ ಸಾಧನಗಳನ್ನು ತಿಳಿಸುತ್ತಾನೆ. 'ದೀರ್ಘಕಾಲದವರೆಗೆ ಕಷ್ಟಪಟ್ಟು ವಿಚಾರಮಾಡಿ ಬ್ರಹ್ಮವಸ್ತುವನ್ನು ತಿಳಿದುಕೊಳ್ಳಬೇಕು. ಆಗಲೇ ಜ್ಞಾನವು ದೃಢವಾಗಿ ನಿಲ್ಲುತ್ತದೆ. ಒಂದು ಮಾತಿನಲ್ಲಿ ತಿಳಿಸುವ ವಸ್ತು ಅದಲ್ಲ'-ಎಂದು ವರುಣನ ಆಶಯ. ಅದಕ್ಕೋಸ್ಕರ ಅನ್ನ, ಪ್ರಾಣ, ಚಕ್ಷುಸ್, ಶ್ರೋತ್ರ, ಮನಸ್ಸು, ವಾಕ್-ಇವು ಬ್ರಹ್ಮವನ್ನು ತಿಳಿಯುವ ಸಾಧನಗಳು ಎಂದು ಹೇಳುತ್ತಾನೆ. ಅನಂತರ ಬ್ರಹ್ಮದ ತಟಸ್ಥಲಕ್ಷಣವನ್ನು ಹೀಗೆ ತಿಳಿಸುತ್ತಾನೆ. "ಹಿರಣ್ಯಗರ್ಭನಾದ ಬ್ರಹ್ಮನಿಂದ ಹಿಡಿದು ಸಕಲಜೀವಿಗಳೂ ಯಾವುದರಿಂದ ಜೀವಿಸುತ್ತವೆಯೋ, ಜನಿಸಿದ ಮೇಲೆ ಯಾವುದರ ಬಲದಿಂದ ಪ್ರಾಣವನ್ನು ಹಿಡಿದುಕೊಂಡಿರುತ್ತವೆಯೋ, ಅನಂತರ ಯಾವುದರಲ್ಲಿ ಲಯ ಹೊಂದುತ್ತವೆಯೋ ಮತ್ತು ಉತ್ಪತ್ತಿ ಸ್ಥಿತಿ ಲಯ ಕಾಲಗಳಲ್ಲಿ ಯಾವುದರೊಡನೆ ತಾದಾತ್ಮ್ಯವನ್ನು ಹೊಂದಿಯೇ ಇರುತ್ತವೆಯೋ ಅದೇ ಬ್ರಹ್ಮ" ಎನ್ನುತ್ತಾನೆ.

ಇದನ್ನು ಅನ್ವಯವ್ಯತಿರೇಕಗಳಿಂದ ತಿಳಿದುಕೊಳ್ಳಬೇಕು. ಸಾಧನಗಳಾದ ಅನ್ನಪ್ರಾಣಾದಿಗಳಲ್ಲಿ ಯಾವುದು ಅನುಗತವಾಗಿದೆಯೋ ಎಂಬುದು ಅನ್ವಯ. ಆದರೆ ಅನ್ನಪ್ರಾಣಾದಿಗಳು ಯಾವುದರಲ್ಲಿ ಇಲ್ಲವೋ ಎಂಬುದು ವ್ಯತಿರೇಕ. ಅನ್ನಪ್ರಾಣಾದಿಗಳಲ್ಲಿ ಬ್ರಹ್ಮವು ಅನುಗತವಾಗಿದೆ. ಬ್ರಹ್ಮದಲ್ಲಿ ಅನ್ನಾದಿಗಳು ಇಲ್ಲ. ಇವೆಲ್ಲವನ್ನೂ ವಿಚಾರಮಾಡು. ಅದೇ ಬ್ರಹ್ಮ ಎಂದು ವರುಣನ ಉಪದೇಶ. ಪ್ರಾಣ, ಶ್ರೋತ್ರಾದಿಗಳ ವಿಚಾರವು ಬ್ರಹ್ಮೋಪಲಬ್ಧಿಗೆ ಸಾಧನಗಳೆಂದು ಬೃಹದಾರಣ್ಯಕದಲ್ಲಿಯೂ (೪-೧) ಕೇನೋಪನಿಷತ್ತಿನಲ್ಲಿಯೂ (೧-೨) ಹೇಳಿದೆ.

ವರುಣನು ನೇರವಾಗಿ ಬ್ರಹ್ಮದ ಸ್ವರೂಪವನ್ನು ತಿಳಿಸಲಿಲ್ಲ. 'ಸತ್ಯಂ ಜ್ಞಾನಮನಂತಂ ಬ್ರಹ್ಮ, ತತ್ತ್ವಮಸಿ' ಎಂದು ಹೇಳಲಿಲ್ಲ. ನಿನ್ನ ಹೃದಯದಲ್ಲಿಯೇ ಬ್ರಹ್ಮವಿದೆ, ಜೀವಾತ್ಮನೇ ಪರಮಾರ್ಥದಲ್ಲಿ ಬ್ರಹ್ಮ-ಎಂದೂ ಹೇಳಲಿಲ್ಲ. ಆದ್ದರಿಂದ ಭೃಗುವು "ಅನ್ನಾದಿ ಸಾಧನದ್ವಾರಗಳನ್ನು ಅನ್ವಯ ವ್ಯತಿರೇಕಗಳಿಂದ ವಿಚಾರಮಾಡು ಎಂಬುದು ನನ್ನ ತಂದೆಯ ಇಚ್ಛೆಯಾಗಿರುತ್ತದೆ. ಇದು ತಪೋಬಲದಿಂದಲೇ ಸಾಧ್ಯವಾಗತಕ್ಕದ್ದು" ಎಂದು ನಿಶ್ಚಯಿಸಿ ತಪಸ್ಸನ್ನಾಚರಿಸಿದನು.

ತಪಸ್ಸೆಂದರೇನು? ಪುರಾಣಾದಿಗಳಲ್ಲಿ ಅದರ ವಿವರಣೆ ನಾನಾರೀತಿಯಾಗಿದೆ. 'ತಪ-ಆಲೋಚನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದವಿದು. ಆಲೋಚನೆ ಎಂದರೆ ವಿಚಾರ. ಒಂದು ನಿರ್ದಿಷ್ಟವಾದ ವಿಷಯವನ್ನು ಕುರಿತು ಏಕಾಗ್ರತೆಯಿಂದ ವಿಚಾರಮಾಡುವುದೇ ಪ್ರಕೃತದಲ್ಲಿ ತಪಸ್ಸು. ಶ್ರೀ ಸುರೇಶ್ವರರು ವಾರ್ತಿಕದಲ್ಲಿ "ಅನ್ವಯವ್ಯತಿರೇಕಾಭ್ಯಾಂ ಚಿಂತನಂ ವಾ ತಪೋ ಭವೇತ್" ಎಂದು ಹೇಳಿದ್ದಾರೆ. ಸೂತಸಂಹಿತೆಯಲ್ಲಿ ಪರಮೇಶ್ವರನ ಉಕ್ತಿ ಹೀಗಿದೆ-

**ಕೋಽಹಂ ಮುಕ್ತಿಃ ಕಥಂ ಕೇನ ಸಂಸಾರಂ ಪ್ರತಿಪನ್ನವಾನ್ ।**
**ಇತ್ಯಾಲೋಚನಮರ್ಥಜ್ಞಾಸ್ತಪಃ ಶಂಸಂತಿ ಪಂಡಿತಾಃ ॥**

ನಾನು ಯಾರು? ಯಾವ ಕಾರಣದಿಂದ ಹುಟ್ಟಿ ಸಂಸಾರಿಯಾಗಿದ್ದೇನೆ? ಈ ಸಂಸಾರದಿಂದ ಬಿಡುಗಡೆ ಹೇಗೆ? - ಎಂಬ ಚಿಂತನೆಯನ್ನು ವಿದ್ವಾಂಸರು ತಪಸ್ಸೆನ್ನುತ್ತಾರೆ - ಎಂದು ತಾತ್ಪರ್ಯ. ಆಹಾರಾದಿನಿಯಮಪೂರ್ವಕವಾಗಿ ಬ್ರಹ್ಮಾದಿದೇವತೆಗಳನ್ನುದ್ದೇಶಿಸಿ ಮಾಡುವ ಪುರಾಣೋಕ್ತ ತಪಸ್ಸೂ ಸಹ ಬ್ರಹ್ಮಜಿಜ್ಞಾಸುವಿಗೆ ಸಹಾಯ ಮಾಡುತ್ತದೆ. ಅದೇನೂ ತ್ಯಾಜ್ಯವಲ್ಲ.

## ದ್ವಿತೀಯಾನುವಾಕ

**ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಅನ್ನೇನ ಜಾತಾನಿ ಜೀವಂತಿ । ಅನ್ನಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥**

ವರುಣನು ಅನ್ನಪ್ರಾಣಾದಿಗಳು ಬ್ರಹ್ಮಜ್ಞಾನಕ್ಕೆ ದ್ವಾರಗಳೆಂದು ಹೇಳಿ ಬ್ರಹ್ಮದ ತಟಸ್ಥಲಕ್ಷಣವನ್ನು ಹೇಳಿದ್ದಾನೆ. ಇವೆರಡನ್ನೂ ಭೃಗುವು ಸಮನ್ವಯ ಮಾಡಿ ತಟಸ್ಥಲಕ್ಷಣವನ್ನು ಅನ್ನದಲ್ಲಿಯೇ ಅನ್ವಯಿಸಿ ನೋಡುತ್ತಾನೆ. ಅನ್ನಮಯಾದಿಕೋಶಗಳ ವಿಚಾರವು ಹಿಂದೆ ಆನಂದವಲ್ಲಿಯಲ್ಲಿ ಬಂದಿದ್ದರೂ, ಅನ್ನಮಯಕೋಶಕ್ಕೆ ಮೂಲವಾದ ಅನ್ನದಿಂದಲೇ ಅವನ ವಿಚಾರ ಪ್ರಾರಂಭವಾಗುತ್ತದೆ. ಮತ್ತು ವರುಣನು ಅನ್ನವೆಂದು ಹೇಳಿದ್ದಾನೆಯೇ ಹೊರತು ಅನ್ನಮಯವೆಂದು ಹೇಳಿಲ್ಲ.

ಭೃಗುವು ಅನ್ನವನ್ನೇ ಮೊದಲು ವಿಚಾರಕ್ಕೆ ತೆಗೆದುಕೊಂಡನು. ಪ್ರಾಣಿಗಳು

ರೇತೋರೂಪದಲ್ಲಿ ಪರಿಣತವಾದ ಅನ್ನದಿಂದ ಹುಟ್ಟುತ್ತವೆ. ಅನ್ನದಿಂದಲೇ ಜೀವಿಸುತ್ತವೆ. ಕಡೆಯಲ್ಲಿ ಪೃಥಿವೀ ಓಷಧಿಗಳ ರೂಪದಲ್ಲಿ ಪರಿಣಮಿಸಿ ಮತ್ತೆ ಅನ್ನವೇ ಆಗಿಬಿಡುತ್ತಾನೆ! ಆದ್ದರಿಂದ ಅನ್ನವೇ ಬ್ರಹ್ಮ ಎಂದು ತಿಳಿದನು. ಆಮೇಲೆ ಆತನಿಗೆ ಮತ್ತೆ ಸಂಶಯ ಹುಟ್ಟಿತು. ಪೃಥಿವೀ ಓಷಧಿಗಳಿಂದ ಅನ್ನಹುಟ್ಟುತ್ತದೆ. ಬ್ರಹ್ಮವು ಹುಟ್ಟುತ್ತದೆಯೆ? ಬ್ರಹ್ಮವನ್ನು ಉಪಾಸನೆಮಾಡಬೇಕೆಂದು ಶಾಸ್ತ್ರದಲ್ಲಿದೆ. ಅನ್ನವನ್ನು ಉಪಾಸನೆ ಮಾಡುತ್ತಾರೆಯೆ? ಅನ್ನವೇ ದೇಹವಾಗುತ್ತದೆ. ದೇಹವು ನಾಶವಾಗುತ್ತದೆ. ಬ್ರಹ್ಮಕ್ಕೆ ನಾಶ ಉಂಟೆ? ಇವೇ ಮೊದಲಾದ ಸಂಶಯಗಳು ಹುಟ್ಟಿ ಭೃಗುವು ಮತ್ತೆ ತಂದೆಯಾದ ವರುಣನ ಬಳಿಗೆ ಹೋಗುತ್ತಾನೆ. ಹೀಗೆ ಅನೇಕಸಲ ಹೋದಾಗಲೂ ವರುಣನು 'ತಪಸ್ಸು ಮಾಡು, ತಪಸ್ಸು ಮಾಡು' ಎಂದೇ ಉಪದೇಶಿಸಿ ತಪಸ್ಸೇ ಬ್ರಹ್ಮ ಎಂದು ತಿಳಿಸುತ್ತಾನೆ. ಪೂರ್ವೋಕ್ತ ರೀತಿಯಲ್ಲಿ ಮತ್ತೆ ಮತ್ತೆ ವಿಚಾರ ಮಾಡುತ್ತಿರುವುದೇ ಬ್ರಹ್ಮಜ್ಞಾನವನ್ನು ಗಳಿಸಲು ಉತ್ತಮಸಾಧನವೆಂದು ಇದರಿಂದ ಗೊತ್ತಾಗುತ್ತದೆ.

## ತೃತೀಯಾನುವಾಕ

**ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ । ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಪ್ರಾಣೇನ ಜಾತಾನಿ ಜೀವಂತಿ । ಪ್ರಾಣಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥**

ತಂದೆಯ ಆದೇಶದಂತೆ ವರುಣನು ಏಕಾಗ್ರತೆಯಿಂದ ದೀರ್ಘವಾಗಿ ತತ್ತ್ವಚಿಂತನೆಮಾಡಿ ಪ್ರಾಣವೇ ಬ್ರಹ್ಮ ಎಂದು ತಿಳಿದುಕೊಂಡನು. ಅನ್ನಘಟಿತವಾದ ಅನ್ನಮಯಕೋಶಕ್ಕಿಂತ ವಾಯುಘಟಿತವಾದ ಪ್ರಾಣಮಯಕೋಶವು ಅಂತರತಮವಾದದ್ದು. ಅನ್ನವು ಕ್ರಿಯಾಶೂನ್ಯವಾದದ್ದು. ಪ್ರಾಣವಾಯು ಕ್ರಿಯಾವಿಶಿಷ್ಟವಾದದ್ದು. ಅಲ್ಲದೆ ಸೂತ್ರಾತ್ಮರೂಪವಾದ ಪ್ರಾಣಕ್ಕೆ ಅನ್ನವು ಅಧೀನವಾದದ್ದು. ಆದ್ದರಿಂದ ಅನ್ನವು ಬ್ರಹ್ಮವಾಗಲಾರದು ಎಂದು ಚಿಂತಿಸಿ, ಪ್ರಾಣವು ಬ್ರಹ್ಮವೆಂದು ಭೃಗುವು ತಿಳಿದನು. ಅನ್ನಮಯವಾದ ಶರೀರವನ್ನು ನಡೆಸುವ ಪ್ರಾಣವೇ ಅನ್ನದಮೂಲಕ ಪ್ರಾಣಿಗಳ ಉತ್ಪತ್ತಿ ಸ್ಥಿತಿಲಯಗಳನ್ನು ನಡೆಸುತ್ತದೆಯಾದ್ದರಿಂದ ಪ್ರಾಣವೇ ಬ್ರಹ್ಮವೆಂದುಕೊಂಡನು. ಭೃಗುವಿಗೆ ಮತ್ತೆ ಸಂದೇಹ ಹುಟ್ಟಿತು. ಪ್ರಾಣದಲ್ಲಿ ಕ್ರಿಯಾಶಕ್ತಿ ಇದ್ದರೂ ಜ್ಞಾನಶಕ್ತಿ

ಇಲ್ಲ. ಜ್ಞಾನವೇ ಇಲ್ಲದ ವಸ್ತು ಪ್ರಾಣಿಗಳನ್ನು ಸೃಷ್ಟಿಸೀತೇ–ಇತ್ಯಾದಿ ವಿಚಾರಗಳು ಹುಟ್ಟಿ ನಿರ್ಧರಿಸಲಾರದೆ ಮತ್ತೆ ತಂದೆಯ ಬಳಿಗೆ ಹೋದನು. ತಂದೆಯು 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' ಎಂಬುದಾಗಿ ಮತ್ತೆ ನುಡಿದನು. ಭೃಗುವಿನ ತಪಸ್ಸು ಮತ್ತೆ ಆರಂಭವಾಯಿತು.

## ಚತುರ್ಥಾನುವಾಕ

**ಮನೋ ಬ್ರಹ್ಮೇತಿ ವ್ಯಜಾನಾತ್ । ಮನಸೋ ಹ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಮನಸಾ ಜಾತಾನಿ ಜೀವಂತಿ । ಮನಃಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥**

ಭೃಗುವು ತಪಸ್ಸನ್ನಾಚರಿಸಿ ಮನಸ್ಸು ಬ್ರಹ್ಮವೆಂದು ನಿಶ್ಚಯಿಸಿದನು. ಏಕೆಂದರೆ, ಮನಸ್ಸಿಗೆ ಜ್ಞಾನಶಕ್ತಿ ಇದೆ. ಅದಕ್ಕೆ ಪ್ರಾಣವು ಅಧೀನವಾಗಿದೆ. ಅದರಿಂದ ಪ್ರೇರಿತವಾಗಿ ಪ್ರಾಣ, ಅನ್ನಗಳು ಪ್ರಾಣಿಗಳ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತವೆ– ಎಂದು ಆತನ ಎಣಿಕೆಯಾಗಿತ್ತು. ಇಲ್ಲಿ ಮನಸ್ಸೆಂದರೆ ಒಬ್ಬ ವ್ಯಕ್ತಿಯ ಮನಸ್ಸಲ್ಲ. ಆಧಿದೈವಿಕವಾಗಿರುವ ಸಮಷ್ಟಿಯಾದ ಅಂತಃಕರಣ.

ಆದರೆ ಮನಸ್ಸು ಹೇಗೆ ಬ್ರಹ್ಮವಾದೀತು? ಮನಸ್ಸು ಸಂಕಲ್ಪ–ವಿಕಲ್ಪಗಳನ್ನು ಮಾಡುತ್ತದೆ. ಸಂಶಯವನ್ನುಂಟುಮಾಡುವ ಮನಸ್ಸು ಈ ಜಗತ್ತಿನ ವ್ಯವಸ್ಥಿತವಾದ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣವಾದೀತೆ? ಆದ್ದರಿಂದ ತಂದೆಯ ಬಳಿಗೆ ಹೋಗಿ ಈ ಸಂಶಯವನ್ನು ಹೋಗಲಾಡಿಸಿಕೊಳ್ಳಬೇಕೆಂದು ಭೃಗುವು ವರುಣನ ಬಳಿಗೆ ಹೋದನು. ವರುಣನು "ವತ್ಸ–ಭೃಗು, ನೀನು ವಿಚಾರಮಾಡುತ್ತ ಸತ್ಯದ ಸಮೀಪಕ್ಕೆ ಬರುತ್ತಿದ್ದೀಯೆ. ಇನ್ನಷ್ಟು ತಪಸ್ಸು ಮಾಡು" ಎಂದನು. ಸತ್ಯವನ್ನು ಕಂಡುಕೊಳ್ಳಲೇಬೇಕೆಂದು ಭೃಗುವು ನಿರ್ಧರಿಸಿ ಪುನಃ ತಪಸ್ಸಿನಲ್ಲಿ ತೊಡಗಿದನು.

## ಪಂಚಮಾನುವಾಕ

**ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ವಿಜ್ಞಾನೇನ ಜಾತಾನಿ ಜೀವಂತಿ । ವಿಜ್ಞಾನಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ। ತಗ್ಂಹೋವಾಚ । ತಪಸಾ ಬ್ರಹ್ಮವಿಜಿಜ್ಞಾಸಸ್ವ। ತಪೋ ಬ್ರಹ್ಮೇತಿ। ಸ ತಪೋಽತಪ್ಯತ। ಸ ತಪಸ್ತಪ್ತ್ವಾ।**

ಮನಸ್ಸು ಬ್ರಹ್ಮವಲ್ಲ. ವಿಜ್ಞಾನವು ಬ್ರಹ್ಮ-ಎಂದು ಭೃಗುವಿನ ಮನಸ್ಸಿಗೆ ಹೊಳೆಯಿತು. ವೇದಾರ್ಥದ ನಿಶ್ಚಿತಜ್ಞಾನವೇ ವಿಜ್ಞಾನ. ಅಥವಾ ಲೌಕಿಕದೃಷ್ಟಿಯಿಂದ ಯಾವುದಾದರೊಂದು ವಸ್ತುವಿನ ನಿಶ್ಚಯಜ್ಞಾನ. ಈ ನಿಶ್ಚಯವೇ ಮನುಷ್ಯನನ್ನು ಕ್ರಿಯೆಯಲ್ಲಿ ತೊಡಗಿಸುತ್ತದೆ. ಸಂಶಯಗ್ರಸ್ತನು ಯಾವ ಕ್ರಿಯೆಯನ್ನೂ ಮಾಡುವುದಿಲ್ಲ. ಮನಸ್ಸಿನ ಸಂಶಯವ್ಯಾಪಾರವು ಕಡೆಗೆ ನಿಶ್ಚಯವೆಂಬ ವಿಜ್ಞಾನದಲ್ಲಿ ಪರ್ಯವಸಾನವಾಗಲೇ ಬೇಕು. ಸಮಷ್ಟಿಯಲ್ಲಿ ಇದೇ ಬುದ್ಧಿಯೆಂಬ ಮಹತ್ತತ್ತ್ವ. ಬ್ರಹ್ಮವಲ್ಲಿಯಲ್ಲಿ ಹೇಳಿದ **"ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ"** ಎಂಬ ವಾಕ್ಯಗಳನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ಸಮಷ್ಟಿರೂಪವಾದ ಮಹತ್ತತ್ತ್ವವು ಸರ್ವವಿಜ್ಞಾನಗಳಿಗೂ ಆಶ್ರಯ. ಇದನ್ನೇ ಹಿರಣ್ಯಗರ್ಭನೆಂದೂ ಬ್ರಹ್ಮನೆಂದೂ ಹೇಳುತ್ತಾರೆ. **"ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತ"** ಎಂಬ ವಚನವು ಇದನ್ನೇ ಸಮರ್ಥಿಸುತ್ತದೆ. ಬುದ್ಧಿರೂಪವಾದ ಮಹತ್ತತ್ತ್ವವೂ ಸಹ ಅನ್ಯಾಶ್ರಿತವಾಗಿಯೇ ಕಾರ್ಯವನ್ನು ನಡೆಸುತ್ತದೆ. ಸ್ವತಂತ್ರವಲ್ಲದ ಈ ವಿಜ್ಞಾನವೆಂಬ ಮಹತ್ತತ್ತ್ವವು ಬ್ರಹ್ಮವಾಗಲಾರದು. ವಿಜ್ಞಾನಕ್ಕೂ ಉತ್ಪತ್ತಿಲಯಗಳುಂಟು. ಬ್ರಹ್ಮವು ಹೀಗಿರಲಾರದು- ಎಂಬ ಸಂಶಯ ಭೃಗುವಿಗೆ ಹುಟ್ಟಿತು. ಅವನು ಮತ್ತೆ ವರುಣನ ಬಳಿಗೆ ಹೋದನು. ತಂದೆಯ ಆದೇಶದಂತೆ ಮತ್ತೆ ತಪಸ್ಸಿನಲ್ಲಿ ತೊಡಗಿದನು.

## ಷಷ್ಠಾನುವಾಕ

**ಆನಂದೋ ಬ್ರಹ್ಮೇತಿ ವ್ಯಜಾನಾತ್ । ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಆನಂದೇನ ಜಾತಾನಿ ಜೀವಂತಿ । ಆನಂದಂ ಪ್ರಯಂತ್ಯಭಿಸಂವಿಶಂತೀತಿ । ಸೈಷಾ ಭಾರ್ಗವೀ ವಾರುಣೀ ವಿದ್ಯಾ । ಪರಮೇ ವ್ಯೋಮನ್ ಪ್ರತಿಷ್ಠಿತಾ । ಯ ಏವಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ।**

ತಂದೆಯ ಆದೇಶದಂತೆ ಭೃಗುವು ತಪಸ್ಸನ್ನು ಮುಂದುವರಿಸಿದನು. ಶಾಸ್ತ್ರೋಕ್ತನಿಯಮಪೂರ್ವಕ ತಪಸ್ಸಿನೊಡನೆ ವಿಚಾರಾತ್ಮಕವಾದ ತಪಸ್ಸೂ ದೀರ್ಘಕಾಲದವರೆಗೆ ನಡೆಯಿತು. ಅಂತಃಕರಣದಲ್ಲಿದ್ದ ದೋಷಗಳೆಲ್ಲವೂ ಹೋದಮೇಲೆ ಅನ್ನ, ಪ್ರಾಣ, ಮನಸ್ಸು, ವಿಜ್ಞಾನಗಳಲ್ಲಿ ಬ್ರಹ್ಮಲಕ್ಷಣವಾವುದೂ ಕಾಣಿಸಲಿಲ್ಲ. ಒಳಒಳಗೆ ಹೊಕ್ಕು ವಿಚಾರಮಾಡಿದಮೇಲೆ ಸರ್ವಾಂತರತಮವೂ ಹೃದಯಗುಹಾನಿಷ್ಠವೂ ಆದ ಆನಂದವೇ ಬ್ರಹ್ಮವೆಂದು ನಿರ್ಧರಿಸಿದನು. ಇದು

ಆನಂದಮಯಕೋಶವಲ್ಲ. ಆನಂದಮಯನಿಗಿಂತ ಅಂತರತಮವಾದ ಆನಂದವಿದು. ಇದೇ ಬ್ರಹ್ಮ. ವರುಣನೂ ಅದನ್ನೊಪ್ಪಿದನು. ಆನಂದಸ್ವರೂಪವಾದ ಬ್ರಹ್ಮದಿಂದ ವಿಶ್ವವೆಲ್ಲವೂ ಕಾಣಿಸಿಕೊಂಡಿದೆ. ಇದರಿಂದಲೇ ಪ್ರಾಣಿಗಳು ಜೀವಿಸುತ್ತವೆ. ಕಡೆಗೆ ಇದರಲ್ಲಿಯೇ ಲೀನವಾಗುತ್ತವೆ. ಎಂದು ನಿಶ್ಚಯಿಸಿ ಆನಂದಸ್ವರೂಪದ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಂಡನು. ವರುಣನು ಹೇಳಿದ ಚಕ್ಷುಃಶ್ರೋತ್ರಗಳ ವಿಚಾರವನ್ನು ವಿಸ್ತಾರವು ಬೇಡವೆಂದು ಶ್ರುತಿಯು ಕೈಬಿಟ್ಟಿದೆ.

ಹೀಗೆ ತಪಸ್ಸನ್ನು ಒತ್ತಿಹೇಳುವ ಶ್ರುತಿಯ ತಾತ್ಪರ್ಯವೇನೆಂದರೆ, ಬ್ರಹ್ಮಜಿಜ್ಞಾಸುವಾದವನು ತನ್ನ ಬಾಹ್ಯೇಂದ್ರಿಯಗಳನ್ನೂ ಅಂತಃಕರಣವನ್ನೂ ಶಾಂತಸ್ಥಿತಿಗೆ ತಂದುಕೊಳ್ಳಬೇಕು. ವಿಚಾರವನ್ನು ಮುಂದುವರಿಸಬೇಕು ಎಂಬುದೇ ಆಗಿದೆ.

ವರುಣನಿಂದ ಉಪದಿಷ್ಟವೂ ಭೃಗುವಿನಿಂದ ವಿದಿತವಾದ ಬ್ರಹ್ಮವಿದ್ಯೆ ಇದು. ಹೃದಯಾಕಾಶದಲ್ಲಿರುವ ಅದ್ವೈತಾನಂದದಲ್ಲಿ ಸಮಾಪ್ತವಾದದ್ದು. ಅನ್ನಮಯಾತ್ಮಕನಿಂದ ಆರಂಭಿಸಿ ಆನಂದಾತ್ಮನಲ್ಲಿ ಮುಕ್ತಾಯಗೊಂಡಿದೆ. ಹೀಗೆಯೇ ಇನ್ನು ಯಾವನಾದರೂ ವಿಚಾರಮಾಡುತ್ತ ಆನಂದವೇ ಬ್ರಹ್ಮವೆಂದು ನಿಶ್ಚಯಿಸುತ್ತಾನೋ ಅವನೂ ಆನಂದವೆಂಬ ಪರಬ್ರಹ್ಮದಲ್ಲಿ ನೆಲೆಸುತ್ತಾನೆ. ಬ್ರಹ್ಮವೇ ಆಗುತ್ತಾನೆ ಎಂದು ಅಭಿಪ್ರಾಯ.

ಈ ಬ್ರಹ್ಮವಿದ್ಯೆಯನ್ನರಿತವನಿಗೆ ಲೌಕಿಕಫಲವೂ ಉಂಟು. ಆತನಿಗೆ ಬೇಕಾದಷ್ಟು ಆಹಾರಪದಾರ್ಥಗಳು ದೊರೆಯುತ್ತವೆ. ಅವನು ಅನ್ನಾದ-ನಾಗುತ್ತಾನೆ. ಅವನ ಜೀರ್ಣಶಕ್ತಿಯು ಅಧಿಕವಾಗಿ ಆರೋಗ್ಯಶಾಲಿಯಾಗುತ್ತಾನೆ. ಅವನು ಪುತ್ರಸಂಪತ್ತನ್ನು ಪಡೆಯುವನಲ್ಲದೆ, ಗೋವು ಮೊದಲಾದ ಪಶುಗಳೂ ಅವನಿಗೆ ಲಭಿಸುತ್ತವೆ. ಬ್ರಹ್ಮಜ್ಞಾನಿಯ ಬ್ರಹ್ಮವರ್ಚಸ್ಸು ಅಧಿಕವಾಗುತ್ತದೆ. ಅವನು ಕೀರ್ತಿಶಾಲಿಯಾಗುತ್ತಾನೆ.

ಇಲ್ಲೊಂದು ಶಂಕೆ ಹುಟ್ಟುತ್ತದೆ. ಬ್ರಹ್ಮಜ್ಞಾನಿಯು ಕೃತಕೃತ್ಯನಾದವನು. ಅವನಿಗೆ ಯಾವ ವಿಷಯಸುಖಾಭಿಲಾಷೆಯೂ ಇರುವುದಿಲ್ಲ. ಅನ್ನಲಾಭ-ಪುತ್ರಲಾಭಾದಿಗಳಿಂದ ಅವನಿಗೆ ಆಗಬೇಕಾದ್ದೇನಿದೆ? ಲೌಕಿಕದೃಷ್ಟಿಯಿಂದ ಅತ್ಯಂತ ದರಿದ್ರನೆನ್ನಬಹುದಾದ ಆತ್ಮಜ್ಞಾನಿಯೂ ಇರುತ್ತಾನೆ. ಅವಧೂತರಾದ ಬ್ರಹ್ಮಜ್ಞಾನಿಗಳಿರುತ್ತಾರೆ. ಹೀಗಿರುವಾಗ ಪುತ್ರಲಾಭಾದಿಗಳ ವರ್ಣನೆ ಅಸಂಗತವಾಗಿ ತೋರುತ್ತದೆಯಲ್ಲವೆ?

ನಿಜ; ಈ ಪ್ರಯೋಜನಗಳನ್ನು ಹೇಳಿರುವುದು ಅರ್ಥವಾದ. ಸಾಮಾನ್ಯ ಮನುಷ್ಯನಿಗೆ ಬ್ರಹ್ಮವಿದ್ಯೆಯಲ್ಲಿ ಆಸಕ್ತಿಯನ್ನು ಹುಟ್ಟಿಸುವುದು ಇದರ ಉದ್ದೇಶ. ಅನ್ನಾದಿಲಾಭಗಳಿಂದಾಗುವ ಆನಂದವೆಲ್ಲವೂ ಬ್ರಹ್ಮಾನಂದದಲ್ಲಿ ಅಡಗಿಹೋಗುತ್ತವೆಯೆಂದೂ ಇದು ಬ್ರಹ್ಮಾನಂದದ ಒಂದು ಹನಿಯೆಂದು ಶ್ರುತಿಯ ತಾತ್ಪರ್ಯವನ್ನು ಹೇಳಬಹುದು. ಅಥವಾ ಅನ್ನಮಯದಿಂದ ವಿಚಾರವು ಪ್ರಸ್ತುತವಾದ್ದರಿಂದ, ಮುಂದೆ ಹೇಳುವ ಅನ್ನೋಪಾಸನೆಯ ಫಲವನ್ನು ಆದಿಯಲ್ಲಿಯೇ ಹೇಳಲಾಗಿದೆಯೆಂದು ತಿಳಿಯಬೇಕು.

## ಸಪ್ತಮಾನುವಾಕ

**ಅನ್ನಂ ನ ನಿಂದ್ಯಾತ್ । ತದ್ ವ್ರತಮ್ । ಪ್ರಾಣೋ ವಾ ಅನ್ನಮ್ । ಶರೀರಮನ್ನಾದಮ್ । ಪ್ರಾಣೇ ಶರೀರಂ ಪ್ರತಿಷ್ಠಿತಮ್ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ।**

ದ್ವಾರಭೂತವಾದ ಅನ್ನದಿಂದ ಬ್ರಹ್ಮವನ್ನು ತಿಳಿಯುವ ವಿಧಾನವನ್ನು ಅರಿತುಕೊಂಡೆವು. ಆದ್ದರಿಂದ ಅನ್ನವು ಗುರುಸ್ಥಾನದಲ್ಲಿ ಇದೆಯಾದ್ದರಿಂದ ಅದನ್ನು ನಿಂದಿಸಬಾರದು. ನಿಂದಿಸದಿರುವುದೇ ಒಂದು ವ್ರತ. ಇದು ಅನ್ನದ ಸ್ತುತಿಗಾಗಿ ಹೇಳಿದ ವ್ರತ. ಶರೀರದಲ್ಲಿ ಪ್ರಾಣವಾಯುವಿರುವುದರಿಂದ ಪ್ರಾಣವು ಶರೀರಕ್ಕೆ ಅನ್ನವಾಗುತ್ತದೆ. ಈ ಅನ್ನವನ್ನು ಭಕ್ಷಿಸುವ ಶರೀರವು ಅನ್ನಾದ. ಅನ್ನಾದವೆಂದರೆ ಅನ್ನವನ್ನು ತಿನ್ನುವ ವಸ್ತು. ಪ್ರಾಣವಿರುವುದರಿಂದಲೇ ಶರೀರವು ಕೆಡದೆ ಉಳಿದುಕೊಂಡಿದೆ. ಶರೀರವಿರುವುದರಿಂದಲೇ ಪ್ರಾಣವಿರಲು ಸಾಧ್ಯವಾದ್ದರಿಂದ ಶರೀರವೇ ಅನ್ನ. ಪ್ರಾಣವೇ ಅನ್ನಾದವೆಂದೂ ಹೇಳಬಹುದು. ಆದ್ದರಿಂದ ಶರೀರದಲ್ಲಿ ಪ್ರಾಣವು ಪ್ರತಿಷ್ಠಿತವಾಗಿದೆ. ಪ್ರಾಣದಲ್ಲಿ ಶರೀರವಿದೆ ಎಂದು ಉಭಯಥಾ ಹೇಳಬಹುದಾಗಿದೆ.

ಈ ರೀತಿಯಲ್ಲಿ ಯಾವಾತನು ಅನ್ನದ ಮಹಿಮೆಯನ್ನರಿತಿರುವನೋ ಅವನಿಗೆ ಅನ್ನ, ಪ್ರಜೆ, ಪಶು, ಬ್ರಹ್ಮವರ್ಚಸ್ಸು, ಕೀರ್ತಿಗಳು ಲಭಿಸುತ್ತವೆ. ಪ್ರಾಣಶರೀರಗಳು ಪರಸ್ಪರ ಅನ್ನಗಳೂ ಹೌದು, ಅನ್ನಾದಗಳೂ ಹೌದು. ಅನ್ನವಿದ್ದರೆ ಅನ್ನಾದವಿರಲು ಸಾಧ್ಯವಾದ್ದರಿಂದ ಅನ್ನವು ಪ್ರಧಾನ.

## ಅಷ್ಟಮಾನುವಾಕ

**ಅನ್ನಂ ನ ಪರಿಚಕ್ಷೀತ । ತದ್ವ್ರತಮ್ । ಆಪೋ ವಾ ಅನ್ನಮ್ । ಜ್ಯೋತಿರನ್ನಾದಮ್ । ಅಪ್ಸು ಜ್ಯೋತಿಃ ಪ್ರತಿಷ್ಠಿತಮ್ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ।**

ಅನ್ನವು ಬೇಡವೆಂದು ದೂರವಿಡಬಾರದು. ಅದೊಂದು ವ್ರತವೆಂದು ಭಾವಿಸಬೇಕು. ಶ್ರೇಷ್ಠವಾದ ಉತ್ತಮಗುಣಮಟ್ಟದ ಆಹಾರಬೇಕು. ಕೀಳುಮಟ್ಟದ ಆಹಾರಬೇಡ– ಎಂದು ಗರ್ವದಿಂದ ಕೀಳುಮಟ್ಟದ ಆಹಾರವನ್ನು ತಳ್ಳಬಾರದು ಎಂದು ಅಭಿಪ್ರಾಯ.

ಜಲವು ಜ್ಯೋತಿಗೆ (ಅಗ್ನಿಗೆ) ಅನ್ನ. ಜ್ಯೋತಿಯು ಅನ್ನಾದ. ಜಲದಲ್ಲಿ ಜ್ಯೋತಿಯು ನಿಂತಿದೆ. ಜ್ಯೋತಿಯಲ್ಲಿ ಜಲವು ನಿಂತಿದೆ. ಅಗ್ನಿಯನ್ನು ಜಲವು ಆರಿಸುತ್ತದೆ. ಜಲವನ್ನು ಅಗ್ನಿಯು ಶೋಷಿಸುತ್ತದೆ. ಆದ್ದರಿಂದ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿದೆ. ಜ್ಯೋತಿಯು ಜಲಕ್ಕೆ ಅನ್ನ. ಜಲವು ಅನ್ನಾದ. ಆದ್ದರಿಂದ ಇವು ಪರಸ್ಪರ ಅನ್ನಗಳೂ ಹೌದು. ಅನ್ನಾದಗಳೂ ಹೌದು. ಹೀಗೆ ಅನ್ನವೇ ಅನ್ನಾದವಾಗುತ್ತದೆ. ಅನ್ನಾದವೇ ಮತ್ತೆ ಅನ್ನವಾಗುತ್ತದೆ. ಆದ್ದರಿಂದ ಅನ್ನವು ಅನ್ನವನ್ನೇ ಆಶ್ರಯಿಸಿಕೊಂಡಿದೆ ಎಂಬ ತತ್ತ್ವವನ್ನು ಯಾವನು ತಿಳಿದಿರುತ್ತಾನೋ ಆತನಿಗೆ ಅನ್ನ, ಪುತ್ರ, ಪಶು–ಮುಂತಾದವುಗಳು ಲಭಿಸುತ್ತವೆ. ಅವನು ಕೀರ್ತಿಶಾಲಿಯಾಗುತ್ತಾನೆ.

## ನವಮಾನುವಾಕ

**ಅನ್ನಂ ಬಹು ಕುರ್ವೀತ । ತದ್ವ್ರತಮ್ । ಪೃಥಿವೀ ವಾ ಅನ್ನಮ್ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ।**

ಅನ್ನವನ್ನು ಗೌರವದಿಂದ ಕಾಣಬೇಕು. ಅದೊಂದು ವ್ರತವಾಗಿರಲಿ. ಪೃಥ್ವಿಯು ಆಕಾಶಕ್ಕೆ ಅನ್ನ. ಆಕಾಶವು ಅನ್ನಾದ. ಏಕೆಂದರೆ ಪೃಥ್ವಿಯಲ್ಲಿ ಆಕಾಶವು ಪ್ರತಿಷ್ಠಿತವಾಗಿದೆ. ಆಕಾಶದಲ್ಲಿ ಪ್ರಥ್ವಿಯು ಪ್ರತಿಷ್ಠಿತವಾಗಿದೆ. ಆದ್ದರಿಂದ ಆಕಾಶವು

ಅನ್ನ, ಪ್ರಥ್ವಿಯು ಅನ್ನಾದ. ಹೀಗೆ ಅನ್ನದಲ್ಲಿ ಅನ್ನವು ಪ್ರತಿಷ್ಠಿತವಾಗಿದೆ. ಇದನ್ನು ಯಾವನು ತಿಳಿದಿದ್ದಾನೋ ಅವನು ಅನ್ನಾದಿಗಳನ್ನು ಪಡೆಯುತ್ತಾನೆ. ಮತ್ತು ಕೀರ್ತಿಶಾಲಿಯಾಗುತ್ತಾನೆ.

ಇದುವರೆಗೆ ಹೇಳಿದ ಅನ್ನ-ಅನ್ನಾದಗಳು ಕಾರ್ಯಗಳಾದ ಎಂದರೆ - ಶರೀರಾರಂಭಕಗಳಾದ ಪಂಚಭೂತಗಳ ವಿಷಯವೆಂದು ಭಾಷ್ಯಕಾರರು ಕಡೆಯಲ್ಲಿ ಹೇಳಿದ್ದಾರೆ. **'ಪ್ರಾಣೋವಾ ಅನ್ನಂ । ಶರೀರಮನ್ನಾದಮ್'** ಎಂಬುದು ಶರೀರಸಂಬಂಧಿಯೆಂದು ಸ್ಪಷ್ಟವಾಗಿದೆ.

**ಆಪೋವಾ ಅನ್ನಮ್ । ಜ್ಯೋತಿರನ್ನಾದಮ್** -ಜ್ಯೋತಿಯೆಂದರೆ ಜಠರಾಗ್ನಿ. ಜಲಪಾನದಿಂದ ಜಠರಾಗ್ನಿಯ ಶಕ್ತಿಯು ವರ್ಧಿಸಿ ಆಹಾರವನ್ನು ಜೀರ್ಣಿಸುತ್ತದೆ. ಜಲವು ಅನ್ನ, ಜಠರಾಗ್ನಿ ಅನ್ನಾದ. ಹಸಿವು ಹೆಚ್ಚಿದಾಗ ಮತ್ತು ಬಾಯಾರಿಕೆಯಾದಾಗ ಜಲಪಾನದಿಂದ ಜಠರಾಗ್ನಿಯ ತಾಪವು ಶಾಂತವಾಗುತ್ತದೆ. ಜ್ಯೋತಿಯು ಅನ್ನ, ಜಲವು ಅನ್ನಾದ.

**ಪೃಥಿವೀ ವಾ ಅನ್ನಮ್ । ಆಕಾಶೋಽನ್ನಾದಃ ।** ಪೃಥಿವಿಯ ಅಂಶವು ಅಧಿಕವಾಗಿರುವುದರಿಂದ ಶರೀರವೇ ಪೃಥಿವೀ. ದೇಹದಲ್ಲಿ ಆಕಾಶವು (ಖಾಲಿಜಾಗ) ಇರುವುದರಿಂದ ಆಶ್ರಯವನ್ನಿತ್ತ ಪೃಥಿವಿಯೇ ಅನ್ನ. ಆಕಾಶವು ಅನ್ನಾದ. ಆಕಾಶವಿರುವುದರಿಂದಲೇ ಆಹಾರಾದಿಗಳನ್ನು ಪಡೆದು ಶರೀರವು ಉಳಿದುಕೊಂಡಿದೆ. ಆದ್ದರಿಂದ ಆಕಾಶವು ಅನ್ನ. ಪೃಥಿವೀ ಅನ್ನಾದ. ತನ್ನ ಸ್ಥಿತಿಗೆ ಕಾರಣವಾದ ಆಶ್ರಯವು ಅನ್ನ. ಆಶ್ರಿತವಾದ ತಾನು ಅನ್ನಾದ.

## ದಶಮಾನುವಾಕ

**ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್‌ವ್ರತಮ್ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ । ಏತದ್ವೈ ಮುಖತೋಽನ್ನಗ್ಂ ರಾದ್ಧಮ್ । ಮುಖತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವೈ ಮಧ್ಯತೋಽನ್ನಗ್ಂ ರಾದ್ಧಮ್ । ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವಾ ಅಂತತೋಽನ್ನಗ್ಂ ರಾದ್ಧಮ್ । ಅಂತತೋಽಸ್ಮಾ ಅನ್ನಗ್ಂ ರಾಧ್ಯತೇ ॥೧॥**

**ಯ ಏವಂ ವೇದ । ಕ್ಷೇಮ ಇತಿ ವಾಚಿ । ಯೋಗಕ್ಷೇಮ ಇತಿ ಪ್ರಾಣಾಪಾನಯೋಃ । ಕರ್ಮೇತಿ ಹಸ್ತಯೋಃ । ಗತಿರಿತಿ ಪಾದಯೋಃ । ವಿಮುಕ್ತಿರಿತಿ ಪಾಯೌ । ಇತಿ ಮಾನುಷೀಃ ಸಮಾಜ್ಞಾಃ । ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ ॥೨॥**

ಯಶ ಇತಿ ಪಶುಷು । ಜ್ಯೋತಿರಿತಿ ನಕ್ಷತ್ರೇಷು । ಪ್ರಜಾತಿರಮೃತಮಾನಂದ ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ । ತತ್ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ ಭವತಿ । ತನ್ಮನ ಇತ್ಯುಪಾಸೀತ । ಮಾನವಾನ್ ಭವತಿ ॥೩॥

ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ । ತದ್ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ ಭವತಿ । ತದ್ ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿ ಯೇಽಪ್ರಿಯಾ ಭ್ರಾತೃವ್ಯಾಃ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ ॥೪॥

ಸ ಯ ಏವಂವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯ-ಮಾತ್ಮಾನಮುಪಸಂಕ್ರಮ್ಯ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ । ಏತಂ ವಿಜ್ಞಾನಮಯ-ಮಾತ್ಮಾನಮುಪಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತತ್ ಸಾಮಗಾಯನ್ನಾಸ್ತೇ । ಹಾ೩ವು ಹಾ೩ವು ಹಾ೩ವು ॥೫॥

ಅಹಮನ್ನಮಹಮನ್ನಮಹಮನ್ನಮ್ । ಅಹಮನ್ನಾದೋ೩ ಹಮನ್ನಾದೋ೩ಹಮನ್ನಾದಃ । ಅಹಗ್ಂಶ್ಲೋಕಕೃದಹಗ್ಂಶ್ಲೋಕ-ಕೃದಹಗ್ಂಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ೩ಸ್ಯ । ಪೂರ್ವಂ ದೇವೇಭ್ಯೋಽಮೃತಸ್ಯ ನಾ೩ಭಾಯಿ । ಯೋ ಮಾದದಾತಿ ಸ ಇದೇವ ಮಾ೩ವಾಃ । ಅಹಮನ್ನಮನ್ನಮದಂತಮಾ೩ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾ೩ಮ್ । ಸುವರ್ನಜ್ಯೋತೀಃ । ಯ ಏವಂ ವೇದ । ಇತ್ಯುಪನಿಷತ್ ॥೬॥

## ನ ಕಂಚನ ವಸತೌ ಪ್ರತ್ಯಾಚಕ್ಷೀತ

ಆಕಾಶ ಪೃಥಿವಿಗಳನ್ನು ಪರಸ್ಪರ ಅನ್ನ-ಅನ್ನಾದಗಳೆಂದು ಉಪಾಸನೆ ಮಾಡತಕ್ಕವನು, ವಸತೌ = ವಾಸಾರ್ಥವಾಗಿ ಮನೆಗೆ ಬಂದವನಿಗೆ ಇಲ್ಲವೆನ್ನಬಾರದು. ವಸತಿಯನ್ನು ಕೊಟ್ಟಮೇಲೆ ಅವನಿಗೆ ಅನ್ನವನ್ನು ಹಾಕಲೇಬೇಕು. ಆದ್ದರಿಂದ ಯಾವುದಾದರೊಂದು ವಿಹಿತಮಾರ್ಗದಿಂದ

ಆಹಾರವನ್ನು ಅಧಿಕವಾಗಿ ಸಂಪಾದಿಸತಕ್ಕದ್ದು. ಶಿಷ್ಟರಾದ ವಿದ್ವಾಂಸರು ಮನೆಗೆ ಬಂದ ಅಭ್ಯಾಗತನಿಗೆ 'ಅನ್ನವು ಸಿದ್ಧವಾಗಿದೆ' ಎಂದೇ ಹೇಳುತ್ತಾರೆ. ಅರಾಧಿ = ರಾಧ-ಸಂಸಿದ್ಧೌ ಎಂಬ ಧಾತುವಿನ ಕರ್ಮಣಿ ಲುಙ್. ರಾಧ್ಯತೇ= ಕರ್ಮಣಿ ಲಟ್.

ಉಪನಿಷತ್ತಿನಲ್ಲಿ 'ರಾದ್ಧಂ' ಎಂದಿರುವ ಮೂರು ವಾಕ್ಯಗಳಲ್ಲಿಯೂ 'ಪ್ರಯಚ್ಛತಿ'ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಮುಖತಃ = ಮುಖ್ಯವಾದ ಯೌವನಕಾಲದಲ್ಲಿ ಯಾವನು ಗೌರವದಿಂದ ಅಭ್ಯಾಗತನಿಗೆ ಸಿದ್ಧವಾದ ಅನ್ನವನ್ನು ನೀಡಿ ಉಪಚರಿಸುವನೋ ಅವನಿಗೆ ಯೌವನಕಾಲದಲ್ಲಿಯೇ ಅಧಿಕವಾದ ಅನ್ನವು ಪ್ರಾಪ್ತವಾಗುತ್ತದೆ. ಹೀಗೆಯೇ ಮಧ್ಯತಃ = ಮಧ್ಯಮವಯಸ್ಸಿನಲ್ಲಿ, ಅಂತತಃ = ಕಡೆಯ ಮುಪ್ಪಿನಲ್ಲಿ - ಎಂದು ಮುಂದೆ ಯೋಜಿಸಿಕೊಳ್ಳಬೇಕು. ||೧||

ಈ ಪ್ರಕಾರವಾಗಿ ಯಾವಾತನು ಅನ್ನದ ಮಹಿಮೆಯನ್ನು ಅನ್ನದಾನದ ಫಲವನ್ನು ತಿಳಿಯುತ್ತಾನೊ ಅವನಿಗೆ ಒದಗುವ ಫಲವನ್ನು ಹೇಳಿದ್ದಾಯಿತು. ಇದಿಷ್ಟು ಅನ್ನೋಪಾಸನೆಯ ಪ್ರಕಾರ. ಇನ್ನು ಬ್ರಹ್ಮೋಪಾಸನೆಯ ಪ್ರಕಾರವನ್ನು ಹೇಳಲಾಗುವುದು.

ಯೋಗಕ್ಷೇಮ ಎಂಬ ಮಾತು ರೂಢಿಯಲ್ಲಿದೆ. ಕನ್ನಡದಲ್ಲಿ ಅದು ಕುಶಲ, ಸೌಖ್ಯ ಎಂಬ ಅರ್ಥವನ್ನು ಕೊಡುತ್ತದೆ. ಶಬ್ದದ ಮೂಲಾರ್ಥ ಹೀಗಿದೆ - ಯೋಗ = ದೊರಕಿಲ್ಲದ ವಸ್ತುವಿನ ಪ್ರಾಪ್ತಿ. ಕ್ಷೇಮ = ದೊರಕಿದ ವಸ್ತುವಿನ ರಕ್ಷಣೆ. ಅಲಬ್ಧಲಾಭವು ಯೋಗ, ಲಬ್ಧರಕ್ಷಣೆ ಕ್ಷೇಮ. ವಾಕ್ಕಿನಲ್ಲಿ ಕ್ಷೇಮರೂಪದಲ್ಲಿರುವುದು ಬ್ರಹ್ಮವೆಂದು ಅದರ ಉಪಾಸನೆಯನ್ನು ಮಾಡಬೇಕು. ಹೀಗೆಯೇ ಮುಂದೆ ಹೇಳಿರುವುದೆಲ್ಲವೂ ಬ್ರಹ್ಮೋಪಾಸನೆ. ಪ್ರಾಣದಲ್ಲಿ ಯೋಗ, ಅಪಾನದಲ್ಲಿ ಕ್ಷೇಮ, ಹಸ್ತಗಳಲ್ಲಿ ಕ್ರಿಯೆ, ಪಾದಗಳಲ್ಲಿ ಗಮನ, ಗುದದಲ್ಲಿ ವಿಸರ್ಜನೆ - ಇವೆಲ್ಲವೂ ಬ್ರಹ್ಮವೆಂದು ತಿಳಿಯಬೇಕು. ಇವಿಷ್ಟು ಮನುಷ್ಯರ ದೇಹದಲ್ಲಿ ತಿಳಿಯಬೇಕಾದವು; ಆಧ್ಯಾತ್ಮಿಕವಾದವು. ಮುಂದೆ ಹೇಳತಕ್ಕವು ಆಧಿದೈವಿಕಗಳು. ವೃಷ್ಟಿಯಲ್ಲಿ ತೃಪ್ತಿಯೂ ಮಿಂಚಿನಲ್ಲಿ ಬಲವೂ ಬ್ರಹ್ಮವೆಂದು ತಿಳಿಯಬೇಕು. ||೧-೨|| ಮುಂದಿನವು ಸಂಮಿಶ್ರವಾದವುಗಳು.

ಪಶುಗಳಲ್ಲಿ ಯಶಸ್ಸು, ನಕ್ಷತ್ರಗಳಲ್ಲಿ ಬೆಳಕು, ಗುಹ್ಯೇಂದ್ರಿಯಗಳಲ್ಲಿ ಸಂತತಿ, ಅಮೃತ, ಆನಂದಗಳು ಬ್ರಹ್ಮವೆಂದು ತಿಳಿಯಬೇಕು. ಇಲ್ಲಿ ಅಮೃತವೆಂದರೆ ಪುತ್ರೋತ್ಪತ್ತಿಯಿಂದಾಗುವ ಪಿತೃಋಣದ ವಿಮೋಚನೆ.

ಆಕಾಶದಲ್ಲಿ ಸರ್ವಪದಾರ್ಥಗಳೂ ನೆಲೆಸಿರುವುದರಿಂದ ಸರ್ವವೂ ಬ್ರಹ್ಮವೆಂದು ತಿಳಿಯಬೇಕು. ಆಕಾಶವು ಸರ್ವಾಧಾರವೆಂದು ತಿಳಿದು ಆಕಾಶವು ಬ್ರಹ್ಮವೆಂದು ತಿಳಿಯಬೇಕು. ಅದು ಮಹತ್ತ್ವಗುಣವೂ ಮನಸ್ಸೂ ಆಗಿದೆಯೆಂದು ಉಪಾಸನೆ ಮಾಡಬೇಕು. ಉಪಾಸಕನು ಮಹಾತ್ಮನೂ ಮಾನವಂತನೂ ಆಗುತ್ತಾನೆ. ॥೩॥

ಆಕಾಶವು ನಮಸ್ಕಾರಯೋಗ್ಯವಾದ ಬ್ರಹ್ಮವೆಂದು ಉಪಾಸನೆ ಮಾಡಬೇಕು. ಅವನ ಇಷ್ಟಾರ್ಥಗಳು ಸುಲಭವಾಗಿ ಪ್ರಾಪ್ತವಾಗುತ್ತವೆ. ಆಕಾಶವು ಬ್ರಹ್ಮವೆಂದು ಉಪಾಸನೆ ಮಾಡಬೇಕು. ಅವನು ಬಹುದೊಡ್ಡವನೆಂದು ಹೆಸರು ಪಡೆಯುತ್ತಾನೆ.

ವಿದ್ಯುತ್, ವೃಷ್ಟಿ, ಚಂದ್ರ, ಸೂರ್ಯ ಮತ್ತು ಅಗ್ನಿ ಈ ಐದು ವಸ್ತುಗಳು ವಾಯುವಿನಲ್ಲಿ ಮೃತವಾಗುವುದರಿಂದ (ಲೀನವಾಗುವುದರಿಂದ) ವಾಯುವಿಗೆ ಪರಿಮರ ಎಂದೂ ಹೆಸರು (ಐ.ಬ್ರಾ. ೪೦-೫). ವಾಯುವಿಗೆ ಕಾರಣವಾದ ಆಕಾಶವೂ ಪರಿಮರವೇ. ವಿದ್ಯುತ್ ಮೊದಲಾದವು ಆಕಾಶದಲ್ಲಿ ಲೀನವಾಗುತ್ತವೆ. ಆದ್ದರಿಂದ ಆಕಾಶವು, ಪರಬ್ರಹ್ಮವು ನಿರ್ಮಿಸಿದ ಪರಿಮರವೆಂದು ಉಪಾಸನೆ ಮಾಡತಕ್ಕವನ ಶತ್ರುಗಳು ಮೃತರಾಗಿಬಿಡುತ್ತಾರೆ. ಅವನಿಗೆ ಶತ್ರುಗಳಿರುವುದಿಲ್ಲ-ವೆಂದು ತಾತ್ಪರ್ಯ. ಹಾಗೆಯೇ ಅವನಿಗೆ ಬೇಡವಾದವರೂ ಅಡಗಿಹೋಗುತ್ತಾರೆ.

ಈ ಪ್ರಕಾರದಲ್ಲಿ ಉಪಾಸ್ಯನಾದ ಪರಮಾತ್ಮನೇ ಮನುಷ್ಯನ ಹೃದಯದಲ್ಲಿರತಕ್ಕವನು. ಆತನೇ ಸೂರ್ಯಮಂಡಲದಲ್ಲಿರತಕ್ಕವನು. ಉಭಯತ್ರ ಇರುವ ಆ ಪರಮಾತ್ಮನು ಒಬ್ಬನೇ ॥೪॥

**'ಪ್ರಾಣೋ ವಾ ಅನ್ನಂ'** ಎಂಬುದರಿಂದ ಹಿಡಿದು **'ಆಕಾಶೋಽನ್ನಾದಃ'** – ಎಂಬುವವರೆಗೆ ಹೇಳಿದ ಅನ್ನ-ಅನ್ನಾದಗಳೆಲ್ಲವೂ ಕಾರ್ಯವಸ್ತುಗಳು ಎಂದರೆ ಜನ್ಯವಸ್ತುಗಳು. ಅನ್ನವು ಭೋಗ್ಯ, ಅನ್ನಾದನು ಭೋಕ್ತಾ. ಪ್ರಪಂಚ ಭೋಗ್ಯ ಭೋಕ್ತೃಗಳೆಲ್ಲವೂ ಸಂಸಾರಕ್ಕೆ ಸೇರಿದವು. ವಾಙ್ಮನಸಗಳಿಗೆ ಅಗೋಚರನಾದ ಆತ್ಮನು ಸಂಸಾರಿಯಲ್ಲ. ಅವನು ಭೋಗ್ಯವೂ ಅಲ್ಲ; ಭೋಕ್ತನೂ ಅಲ್ಲ- ಎಂದು ಪ್ರತಿಪಾದಿಸುವುದೇ ಶ್ರುತಿಯ ಉದ್ದೇಶವಾಗಿರುತ್ತದೆ. "ಜೀವಾತ್ಮನು ಸುಖದುಃಖಗಳನ್ನು ಭೋಗಿಸುತ್ತಾನೆ. ಆದ್ದರಿಂದ ಅವನು ಸಂಸಾರಿ" ಎಂದು ಹೇಳುವುದು ಭ್ರಾಂತಿಯಿಂದ. ಈ ವಿಚಾರವನ್ನು ಪ್ರಶ್ನೋತ್ತರಗಳ ರೂಪದಲ್ಲಿ ಮುಂದೆ ಬರೆದಿದೆ.

ಪ್ರಶ್ನೆ : ನಾನು ಸುಖಿ, ದುಃಖಿ- ಎಂದು ಅನುಭವವಿರುವಾಗ, ಇದು ಭ್ರಾಂತಿಯೆನ್ನಲು ಪ್ರಮಾಣವೇನು?

**ಉತ್ತರ :** ಪರಮಾತ್ಮನು ಸಂಸಾರಿಯಲ್ಲವೆನ್ನುವುದು ನಿರ್ವಿವಾದ. ಅವನು ಈ ಪಂಚಭೂತಗಳನ್ನು ದೇಹವನ್ನು ಸೃಷ್ಟಿಸಿ ಈ ದೇಹದೊಳಗೆ ಅನುಪ್ರವೇಶಮಾಡಿದನೆಂದು 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಎಂದು ಶ್ರುತಿಯು ಹೇಳಿದೆ. ಯಾವ ಪರಮಾತ್ಮನು ಸೃಷ್ಟಿಸಿದನೋ ಅವನೇ ಅನುಪ್ರವೇಶಮಾಡಿದನು. 'ಸೃಷ್ಟ್ವಾ' ಎಂಬಲ್ಲಿ ಕ್ತ್ವಾ ಪ್ರತ್ಯಯವಿದೆ. "ಸಮಾನಕರ್ತೃಕಯೋಃ ಪೂರ್ವಕಾಲೇ" ಎಂಬ ವ್ಯಾಕರಣಸೂತ್ರದಿಂದ ಸರ್ಜನ-ಅನುಪ್ರವೇಶಗಳೆಂಬ ಎರಡು ಕ್ರಿಯೆಗಳಿಗೂ ಒಬ್ಬನೇ ಕರ್ತನೆಂದು ನಿರ್ಣಯ. ಇದೆಲ್ಲವನ್ನು ಬ್ರಹ್ಮವಲ್ಲಿಯಲ್ಲಿ ತಿಳಿಸಲಾಗಿದೆ. ಆದ್ದರಿಂದ ಕಾರ್ಯವಾದ ದೇಹದಲ್ಲಿ ಅನುಪ್ರವಿಷ್ಟನಾಗಿ ತೋರಿಕೊಳ್ಳುವ ಜೀವಾತ್ಮನು ಪರಮಾತ್ಮನೇ ಆಗಿದ್ದಾನೆ. ಅವನು ಸಂಸಾರಿಯಲ್ಲ.

**ಪ್ರಶ್ನೆ :** 'ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'(ಛಾಂ. ೬-೩-೨) ಎಂಬ ಇನ್ನೊಂದು ಶ್ರುತಿಯೂ ಇದೆಯಷ್ಟೆ. ಆತ್ಮನು ಜೀವರೂಪವಾಗಿ ಪರಿಣಮಿಸಿ ಪ್ರವೇಶಿಸಿದ್ದಾನೆ. ಪಂಚಭೂತಗಳಂತೆ ಜೀವಭಾವವೂ ಕಾರ್ಯವಸ್ತುವಾಗುತ್ತದೆ. ಆದ್ದರಿಂದ ಜೀವನು ಸಂಸಾರಿಯೆನ್ನಲು ಅಡ್ಡಿಯೇನು?

**ಉತ್ತರ :** ಹಾಗಲ್ಲ; 'ತತ್ತ್ವಮಸಿ' ಎಂಬ ಶ್ರುತಿಯೇ ಜೀವನು ಪರಮಾತ್ಮನೇ ಸರಿಯೆಂದು ಹೇಳುತ್ತದೆ. ಪಂಚಭೂತಗಳಂತೆ ಜೀವನೂ ಪರಿಣಾಮಹೊಂದಿ ಜೀವನಾಗಿದ್ದರೆ, 'ತತ್ ತ್ವಮ್' ಎಂಬ ಅಭೇದವು ಯುಕ್ತವಾಗುವುದಿಲ್ಲ.

**ಪ್ರಶ್ನೆ :** 'ತತ್ತ್ವಮಸಿ' ಎಂಬ ಅಭೇದವನ್ನು ಹೇಳಿರುವುದು ಉಪಾಸನಾರ್ಥವಾಗಿ. "ಅಹಂ ಬ್ರಹ್ಮ" ಎಂದು ಬ್ರಹ್ಮವನ್ನೇ ಧ್ಯಾನಿಸುವುದರಿಂದ ಅನೇಕ ಬಗೆಯ ಸಂಪತ್ತುಗಳು ದೊರೆಯುತ್ತವೆ ಎಂದು ತಿಳಿಸುವುದು ಅದರ ತಾತ್ಪರ್ಯ.

**ಉತ್ತರ :** ಜೀವಾತ್ಮನಿಗೆ ಉಪಾಸನಾರ್ಥವಾಗಿ ಹೇಳಿದ ವಚನವೆಂಬುದಕ್ಕೆ ಯಾವ ಆಧಾರವೂ ಇಲ್ಲ. ಉಪಾಸನಾರ್ಥವಾಗಿದ್ದರೆ ಅನ್ಯತ್ರ ಹೇಳಿರುವಂತೆ "ಉಪಾಸೀತ" ಎಂಬ ಕ್ರಿಯಾಪದವಿರಬೇಕಾಗಿತ್ತು. ಅಲ್ಲದೆ ಜೀವನು ಪೃಥಿವ್ಯಾದಿಗಳಂತೆ ಪರಮಾತ್ಮನ ವಿಕಾರ(ಪರಿಣಾಮ)ವಾದರೆ ಪೃಥಿವ್ಯಾದಿಗಳಂತೆ ಅವನಿಗೂ ನಾಶವು ಪ್ರಾಪ್ತವಾದೀತು. 'ನ ಜೀವೋ ಮ್ರಿಯತೇ' ಎಂಬ ಶ್ರುತಿಗೆ ಜೀವಾತ್ಮನ ನಾಶವು ವಿರುದ್ಧವಾದದ್ದು. ಅಲ್ಲದೆ 'ತತ್‌ಸತ್ಯಂ, ಸ ಆತ್ಮಾ'

ಇತ್ಯಾದಿಯಾಗಿ ಜೀವಾತ್ಮ ಪರಮಾತ್ಮರಿಗೆ ಅಭೇದವನ್ನು ಹೇಳುವ ಅನೇಕ ಶ್ರುತಿವಾಕ್ಯಗಳು ದೊರೆಯುತ್ತವೆ. ಜೀವನು ಪರಮಾತ್ಮನ ಪರಿಣಾಮವೆಂದು ಹೇಳಿದರೆ ಆ ಎಲ್ಲ ಶ್ರುತಿವಾಕ್ಯಗಳ ವಿರೋಧವಾಗುತ್ತದೆ.

**ಪ್ರಶ್ನೆ** : ಒಳ್ಳೆಯದು, ಜೀವನು ಪರಮಾತ್ಮನ ಪರಿಣಾಮವಾಗದಿದ್ದರೆ ಬೇಡ. ಅವನು ಸಂಸಾರಿಯಾಗಿ ಸುಖದುಃಖಗಳನ್ನು ಭೋಗಿಸುವುದು ಸ್ಪಷ್ಟವಾಗಿ ನಮ್ಮ ಅನುಭವಕ್ಕೆ ಬರುತ್ತದೆ. ಆದ್ದರಿಂದ ಜೀವನು ಬ್ರಹ್ಮವಲ್ಲವೆಂದು ಧಾರಾಳವಾಗಿ ಹೇಳಬಹುದಲ್ಲವೆ?

**ಉತ್ತರ** : ಸಂಸಾರವನ್ನು ಅನುಭವಿಸತಕ್ಕವನು 'ನಾನು ಸಂಸಾರಿ, ನಾನು ಸುಖಿ, ನಾನು ದುಃಖಿ, ಎಂದು ಹೇಳಿಕೊಳ್ಳುತ್ತಾನೆ. ಅಲ್ಲಿ 'ನಾನು' ಎಂದರೆ ಜೀವಾತ್ಮನಲ್ಲ. ನಾನು ಕಪ್ಪಾಗಿದ್ದೇನೆ. ನಾನು ಬೆಳ್ಳಗಿದ್ದೇನೆ, ನಾನು ಹುಡುಗ, ನಾನು ಮುದುಕ, ನಾನು ಗೃಹಸ್ಥ, ನಾನು ಸಂನ್ಯಾಸಿ ಎಂದೂ ಹೇಳುತ್ತಾರೆ. ಜೀವಾತ್ಮನು ಕಪ್ಪಗೆ ಬೆಳ್ಳಗೆ– ಹೀಗೆಲ್ಲ ಇರುತ್ತಾನೇನು?

**ಪ್ರಶ್ನೆ** : ನಾನು ಕಪ್ಪಾಗಿದ್ದೇನೆ, ಬೆಳ್ಳಗಿದ್ದೇನೆ– ಮುಂತಾದ ವ್ಯವಹಾರವು ಶರೀರಕ್ಕೆ ಸಂಬಂಧಿಸಿದ್ದು. ಜನ್ಮಾಂತರಗಳಿವೆಯೆಂದೂ ಶರೀರವು ಆತ್ಮವಲ್ಲವೆಂದೂ ಶ್ರುತಿಯು ಹೇಳಿರುವುದರಿಂದ ಶರೀರವು ಆತ್ಮವಲ್ಲವೆಂದು ಅಂಗೀಕರಿಸಬಹುದು. ನಾನು ಕಪ್ಪಗಿದ್ದೇನೆ– ಮುಂತಾದ ವ್ಯವಹಾರವು ಶರೀರವು ನಾನೆಂಬ ಭ್ರಾಂತಿಯಿಂದ ಬಂದಿದೆ. ಅದು ಸಾರ್ವತ್ರಿಕವಾದ ಲೌಕಿಕ ವ್ಯವಹಾರ. ಆದರೆ ನಾನು ಸುಖಿ, ನಾನು ದುಃಖಿ– ಮುಂತಾದ್ದನ್ನು ಅವರೊಡನೆ ಸೇರಿಸುವುದು ತರವಲ್ಲ. ಜನ್ಮಾಂತರದ ಪಾಪಪುಣ್ಯಗಳ ಫಲವನ್ನು ನಾನು ಅನುಭವಿಸುತ್ತಿದ್ದೇನೆ–ಎಂದು ಹೇಳುವುದು ಶರೀರಕ್ಕೆ ಸಂಬಂಧಿಸಿದ್ದಲ್ಲ. ಆದ್ದರಿಂದ ಸುಖ ದುಃಖಗಳು ಆತ್ಮಧರ್ಮಗಳು.

**ಉತ್ತರ** : ಆತ್ಮನು ಸಂಸಾರಧರ್ಮವುಳ್ಳವನಲ್ಲ. "ಅಸಂಗೋ ಹ್ಯಯಂ ಪುರುಷಃ" ಇತ್ಯಾದಿ ಶ್ರುತಿಗಳು ಆತ್ಮನಲ್ಲಿ ಯಾವ ಧರ್ಮವೂ ಇಲ್ಲವೆಂದೂ ಅವನು ನಿರಂಜನ, ನಿಷ್ಕ್ರಿಯವೆಂದೂ ಪ್ರತಿಪಾದಿಸುತ್ತವೆ. ಆದ್ದರಿಂದ ಜೀವಾತ್ಮನಲ್ಲಿ ಸುಖದುಃಖಗಳಿವೆಯೆಂಬುದು ವೇದವಿರುದ್ಧವಾಗುತ್ತದೆ. ಮತ್ತು ಇನ್ನೊಂದು ಪ್ರಶ್ನೆ ಹುಟ್ಟುತ್ತದೆ. ಈ ಸುಖದುಃಖಗಳು ಅಭೇದದಿಂದ ಆತ್ಮನಲ್ಲಿಯೇ ಸೇರಿಹೋಗಿರುತ್ತವೆಯೋ? ಅಥವಾ ಆತ್ಮನಿಗಿಂತ ಬೇರೆಯಾಗಿ ಭೇದದಿಂದ ಇರುತ್ತವೆಯೋ? ಅಭೇದದಿಂದ ಆತ್ಮನಲ್ಲಿಯೇ ಸೇರಿಹೋಗಿದ್ದರೆ ಆತ್ಮನು ಸುಖದುಃಖಗಳನ್ನು ಅನುಭವಿಸುತ್ತಾನೆ ಎಂಬುದು ವಿರುದ್ಧವಾಗುತ್ತದೆ. ಒಬ್ಬನೇ

ಕರ್ತೃವೂ ಕರ್ಮವೂ ಆಗುವುದು ಶಕ್ಯವಿಲ್ಲ. ಕರ್ತೃ ಬೇರೆ, ಕರ್ಮ ಬೇರೆ. ಹಾಗಾದರೆ ಆತ್ಮನಲ್ಲಿ ಸುಖದುಃಖಗಳು ಭೇದದಿಂದ ಇವೆ ಎನ್ನುವುದಾದರೆ ಆತನು ಬೇರೆ, ಸುಖದುಃಖಗಳು ಬೇರೆ. ಆತ್ಮನು ಅಸಂಗ ಎಂದು ಸಿದ್ಧವಾಗುತ್ತದೆ. ಚೈತ್ರನಲ್ಲಿ ಹಣವಿದೆ ಎಂದ ಹಾಗೆ ಇದು.

**ಪ್ರಶ್ನೆ** : ಹಾಗಾದರೆ ಭಯ, ಕ್ರೋಧ- ಮುಂತಾದವು ಜೀವಾತ್ಮನಲ್ಲಿ ಉಪಲಬ್ಧವಾಗುವುದು ಹೇಗೆ?

**ಉತ್ತರ** : ಅದೆಲ್ಲವೂ ಉಪಲಬ್ಧೃವಿನ ಧರ್ಮ. ಅಂತಃಕರಣವು (ಮನಸ್ಸು) ಉಪಲಬ್ಧೃ. ಭಯಾದಿಗಳನ್ನು ಮನಸ್ಸು ಗ್ರಹಿಸುತ್ತದೆ. ಆತ್ಮನಲ್ಲ.

**ಪ್ರಶ್ನೆ** : ಹಾಗಾದರೆ ಸಾಂಖ್ಯಶಾಸ್ತ್ರದಲ್ಲಿ ಕಪಿಲ ಮುನಿಯೂ, ವೈಶೇಷಿಕ ಶಾಸ್ತ್ರದಲ್ಲಿ ಕಣಾದಮುನಿಯೂ, ನ್ಯಾಯಶಾಸ್ತ್ರದಲ್ಲಿ ಗೌತಮಮುನಿಯೂ ಭಯ, ಕ್ರೋಧಾದಿಗಳು ಆತ್ಮಧರ್ಮಗಳೆಂದು ಹೇಳಿದ್ದಾರಲ್ಲ. ಅದಕ್ಕೇನು ಸಮಾಧಾನ?

**ಉತ್ತರ** : ಅವರೆಲ್ಲರೂ ತಾರ್ಕಿಕರು, ಪ್ರಮಾಣಭೂತವಾದ ವೇದವನ್ನು ಉಲ್ಲಂಘಿಸಿ ತರ್ಕದಿಂದ ಪರಮಾರ್ಥವನ್ನು ನಿರ್ಣಯಿಸಲು ಹೊರಟಿರುತ್ತಾರೆ. ಬ್ರಹ್ಮಸೂತ್ರದ ತರ್ಕಪಾದದಲ್ಲಿ ಬಾದರಾಯಣಾಚಾರ್ಯರು ಸಾಂಖ್ಯಾದಿ ತರ್ಕಶಾಸ್ತ್ರವು ವೇದವಿರುದ್ಧವೆಂದು ಖಂಡಿಸಿದ್ದಾರೆ. ವೇದವಿರುದ್ಧವಾದ್ದರಿಂದಲೂ ಯುಕ್ತಿಗಳಿಗೆ ಸಹ ಹೊಂದುವುದಿಲ್ಲವಾದ್ದರಿಂದಲೂ ಅವರ ಸಿದ್ಧಾಂತಕ್ಕೆ ಬೇಕಾದ ಮೂಲ ವಚನಗಳಿಲ್ಲವಾದ್ದರಿಂದಲೂ ಕಪಿಲಾದಿಗಳು ಈ ವಿಷಯದಲ್ಲಿ ಶುಷ್ಕ ತಾರ್ಕಿಕರೆಂದೇ ಹೇಳಬೇಕಾಗಿದೆ. ಅವರೂ ಸಹ ಅನ್ಯೋನ್ಯವಿರುದ್ಧವಾಗಿ ತಮ್ಮ ಮತಗಳನ್ನು ಹೇಳಿಕೊಂಡಿದ್ದಾರೆ. ಲೋಕವ್ಯವಹಾರಗಳೆಲ್ಲವೂ ಅವಿದ್ಯಾವಸ್ಥೆಯಲ್ಲಿ ನಡೆಯುವುದರಿಂದ ವ್ಯವಹಾರವು ಪರಮಾರ್ಥನಿರ್ಣಯಕ್ಕೆ ಆಧಾರವಲ್ಲ. ನಮಗಾದರೋ ಜೀವಾತ್ಮನು ಸಂಸಾರಿಯಲ್ಲವೆಂಬುದಕ್ಕೆ ವೇದದ ಆಧಾರವಿದೆ, ಯುಕ್ತಿಯೂ ಇದೆ. ಜೀವನು ಪರಮಾತ್ಮನೇ ಆಗಿರುವುದರಿಂದ ಅವನು ಸಂಸಾರಿಯಲ್ಲ. **'ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ'**- ಇದೇ ಮೊದಲಾದ ಶ್ರುತಿವಚನಗಳಿರುವುದರಿಂದ ಆತ್ಮನು ಒಬ್ಬನೇ ಎಂದು ಸಿದ್ಧವಾಗುತ್ತದೆ.

ಹೀಗೆ ಆತ್ಮನು ಒಬ್ಬನೇ ಸತ್ಯವೆಂದು ತಿಳಿದ ಆತ್ಮಜ್ಞಾನಿಯು ಈ ಅವಿದ್ಯಾಲೋಕವನ್ನು ಬ್ರಹ್ಮವೆಂಬ ಬುದ್ಧಿಯಿಂದ, ಕ್ರಮೇಣ ತ್ಯಜಿಸುತ್ತಾನೆ. ಅನ್ನಮಯಾದಿ ಪಂಚಕೋಶಗಳನ್ನು ಉಪಸಂಕ್ರಮಿಸಿ ಮುಂದೆ ಹೋಗುತ್ತಾನೆ. ಉಪಸಂಕ್ರಮ್ಯ = ಈ ಕೋಶಗಳು ಆತ್ಮವೆಂಬ ಭ್ರಮೆಯನ್ನು ಜ್ಞಾನದಿಂದ ವರ್ಜಿಸಿ ಎಂದರ್ಥ.

ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್– ಕಾಮಾನ್ನೀ = ವಿಧಿನಿಷೇಧಗಳಿಲ್ಲದೆ ದೊರೆತ ಅನ್ನವನ್ನು ತಿನ್ನತಕ್ಕವನು. ಕಾಮರೂಪೀ = ವಿಧಿನಿಷೇದಗಳಿಲ್ಲದೆ ಯಾವ ವೇಷದಲ್ಲಾದರೂ ಇರತಕ್ಕವನು, ಇಮಾನ್ ಲೋಕಾನನುಸಂಚರನ್ = ಸರ್ವವೂ ಆತ್ಮವಾದ್ದರಿಂದ, ತಾನು ಅಜವೂ ಅಮೃತವೂ ಅಭಯವೂ ಅದ್ವೈತವೂ ಆದ ಬ್ರಹ್ಮವಾಗಿ, ಸಮಸ್ತಲೋಕಗಳೂ ಬ್ರಹ್ಮವೆಂದೇ ತಿಳಿದುಕೊಳ್ಳುತ್ತಾನೆ. ಸರ್ವತ್ರ ಸಮವಾಗಿರುವುದರಿಂದ ಸಾಮವೆಂದರೆ ಬ್ರಹ್ಮ. ಏತತ್ = ಇದೆಲ್ಲವೂ ಸಾಮ = ಬ್ರಹ್ಮವೆಂದು ಹೇಳುತ್ತ ಲೋಕಾನುಗ್ರಹಕ್ಕಾಗಿ ತನ್ನ ಕೃತಾರ್ಥತೆಯನ್ನು ಸೂಚಿಸುತ್ತಾ ಹಾಃವು ಹಾಃವು ಹಾಃವು ಎಂದು ತನ್ನ ಆನಂದವನ್ನು ಉದ್ಗರಿಸುತ್ತಾನೆ.

ಇದು ತನ್ನ ವಿಸ್ಮಯವನ್ನು ಹೊರಸೂಸುವ ಗಾನ. ವಿಸ್ಮಯವೇನೆಂದರೆ –ಅದ್ವೈತಾತ್ಮನೂ ನಿರಂಜನನೂ ಆದ ಆತ್ಮನಾಗಿದ್ದರೂ ನಾನೇ ಅನ್ನ–ನಾನೇ ಅನ್ನಾದ, ಇವೆರಡನ್ನೂ ಸೇರಿಸಿದ ಸಂಬಂಧವೂ ನಾನು, ಸಂಬಂಧಕರ್ತನೂ ನಾನು, ಸಂಘಟಿತವೂ ನಾನು, ನಾನೇ! ನಾನೇ! ನಾನೇ!

ಶ್ಲೋಕಕೃತ್ ಎಂಬಲ್ಲಿರುವ ಶ್ಲೋಕಶಬ್ದಕ್ಕೆ ಅನ್ನ ಅನ್ನಾದಗಳಿಗಿರುವ ಭೋಜ್ಯಭೋಜಕತ್ವರೂಪವಾದ ಸಂಬಂಧವೆಂದರ್ಥ. ಅನ್ನಾದನಾದ ಪ್ರಾಣಿಯ ಅವಯವಗಳ ಸಂಘಾತವೆಂದೂ ಹೇಳಬಹುದು. ಇದೆಲ್ಲವೂ ನಾನೇ ಆಗಿರುವುದು ವಿಸ್ಮಯಕ್ಕೆ ಕಾರಣ. ಅಲ್ಲದೆ ಋತಸ್ಯ=ಮೂರ್ತ=ಅಮೂರ್ತಾತ್ಮಕವಾಗಿ ಸತ್ಯವೆಂದು ತೋರುವ ಈ ಜಗತ್ತಿಗೆ ಮೊದಲು ಹುಟ್ಟಿದ ಹಿರಣ್ಯಗರ್ಭನೂ ನಾನೇ! ಇಂದ್ರಾದಿ ದೇವತೆಗಳಿಗೂ ಮೊದಲು ಜನಿಸಿದ ವಿರಾಟ್ ಪುರುಷನೂ ನಾನೇ! ಅಮೃತದ ನಾಭಿಯೂ ನಾನೇ! ಜೀವಿಗಳಿಗೆ ಮೋಕ್ಷವನ್ನೀಯತಕ್ಕವನು ನಾನು. ಅಮೃತವು ನನ್ನ ನಾಭಿಯಲ್ಲಿ(ಮಧ್ಯದಲ್ಲಿ) ಇದೆ. ಅನ್ನಸ್ವರೂಪನಾದ ನನ್ನನ್ನು ಯಾವಾತನು ಅರ್ಥಿಗಳಿಗೆ ನೀಡುತ್ತಾನೋ ಅವನು ನನ್ನನ್ನು(ಅನ್ನವನ್ನು) ರಕ್ಷಿಸಿ ಉಳಿಸಿಕೊಳ್ಳುತ್ತಾನೆ. ದಾತೃವಿನ ಅನ್ನ ವರ್ಧಿಸುತ್ತದೆ.

**ಟಿಪ್ಪಣಿ :** ಇತ್ = ಇತ್ಥಂ = ಈ ಪ್ರಕಾರ, ಆವಾಃ = ಅವತಿ–ರಕ್ಷಿಸುತ್ತಾನೆ.

ಅಹಮನ್ನಹಮನ್ನಮದಂತಮಾದ್ಮಿ = ನಾನೇ ಅನ್ನವಾಗಿದ್ದೇನೆ. ಅರ್ಥಿಗಳಿಗೆ ಅನ್ನವನ್ನು ನೀಡದೇ ಅನ್ನವನ್ನು ತಿನ್ನುವವನನ್ನೇ ನಾನು ತಿಂದು ಬಿಡುತ್ತೇನೆ!

ಶ್ರುತಿಯು ಹೇಳಿದ ಈ ನುಡಿಗಳನ್ನು ಕೇಳಿ ಮುಮುಕ್ಷುವಿಗೆ ಒಂದು ಶಂಕೆ ಹುಟ್ಟಬಹುದು – 'ನನಗೆ ಬೇಡಪ್ಪಾ ಈ ಮೋಕ್ಷ. ಮೋಕ್ಷವಾದಮೇಲೆ ನಾನು ಮತ್ತೆ ಅನ್ನವಾಗಿ ಇನ್ನೊಬ್ಬನಿಂದ ತಿನ್ನಿಸಿಕೊಳ್ಳುತ್ತೇನೆಂದಾದರೆ, ನನಗೆ ಮೋಕ್ಷ ಬೇಡ.

ಮೋಕ್ಷವೆಂದರೆ ಹೆದರಿಕೆಯಾಗುತ್ತದೆ! ನಾನು ಸಂಸಾರಿಯಾಗಿಯೇ ಇರುತ್ತೇನೆ!" ಎನ್ನಬಹುದು. ಇದಕ್ಕೆ ವೇದಾಂತಿಯ ಸಮಾಧಾನವೆಂದರೆ - ಹೆದರಬೇಡಪ್ಪ! ನಿನಗೆ ಏನೂ ಆಗುವುದಿಲ್ಲ. ಸುಖವಾಗಿರುತ್ತೀಯೆ. ಅನ್ನ-ಅನ್ನಾದ ಎಂಬುದೆಲ್ಲವೂ ಲೋಕವ್ಯವಹಾರಕ್ಕೆ ಸಂಬಂಧಿಸಿದ್ದು.

ವಾಚಾರಂಭಣಂ ವಿಕಾರೋ ನಾಮಧೇಯಂ । ಮೃತ್ತಿಕೇತ್ಯೇವ ಸತ್ಯಂ- ಇತ್ಯಾದಿ ಶ್ರುತಿಗಳಿಂದಲೂ ಅನ್ನಾದಿಗಳೆಲ್ಲವೂ ದೃಶ್ಯವಾದ್ದರಿಂದಲೂ ಅನ್ನವಾಗಲಿ ಅನ್ನಾದವಾಗಲಿ ಮಿಥ್ಯೆಯೇ ಹೊರತು ಸತ್ಯವಲ್ಲ. ಈ ಪ್ರಕಾರವಾಗಿ ಸಂಸಾರಿಯಾದವನಿಗೆ ವ್ಯವಹಾರವು ಸತ್ಯವೆನಿಸಿದರೂ ಬ್ರಹ್ಮಜ್ಞಾನಿಗೆ ಇದೆಲ್ಲವೂ ಮಿಥ್ಯೆಯಾಗಿ ಬ್ರಹ್ಮವೊಂದೇ ಸತ್ಯವೆಂದು ತಿಳಿದುಬರುತ್ತದೆ. ಸಂಸಾರಾವಸ್ಥೆಯಲ್ಲಿದ್ದಾಗ ಹೀಗಿದ್ದರೂ ಈಗ ಪರಮಾನಂದಸ್ವರೂಪವಾಗಿದ್ದೇನೆ- ಎಂಬುದನ್ನು ಈ ರೀತಿಯಾಗಿ ಆಲಂಕಾರಿಕ ಭಾಷೆಯಲ್ಲಿ ತಿಳಿಸಿದೆ.

**ಅಹಂ ವಿಶ್ವಂ ಭುವನಮಭ್ಯಭವಾಂ೩ಮ್** = ನಾನು ಭೂರಾದಿ ಸಮಸ್ತವಿಶ್ವವನ್ನು ರುದ್ರರೂಪದಿಂದ ಸಂಹರಿಸಿಬಿಡುತ್ತೇನೆ. **ಸುವರ್ನ** = ಸೂರ್ಯನಂತೆ **ಜ್ಯೋತೀಃ** = ನನ್ನ ಪ್ರಕಾಶವು ಸದಾ ಬೆಳಗುತ್ತದೆ. **ಸುವಃ** = ಸೂರ್ಯ, **ನ** = ಸಾದೃಶ್ಯವನ್ನು ಬೋಧಿಸುವ ಅವ್ಯಯ.

ಸತ್ಯಜ್ಞಾನಾನಂತಸ್ವರೂಪನಾದ ನಾನು ಅವಿದ್ಯಾಜನ್ಯವಾದ ಅಜ್ಞಾನವನ್ನು, ಸೂರ್ಯನು ಕತ್ತಲೆಯನ್ನು ಹೋಗಲಾಡಿಸುವಂತೆ, ಹೋಗಲಾಡಿಸುತ್ತೇನೆ.- ಎಂದು ತಾತ್ಪರ್ಯ.

**ಇತ್ಯುಪನಿಷತ್**

***************

ಉಪಾಸನಂ ಚ ಯಥಾಶಾಸ್ತ್ರಂ ತುಲ್ಯಪ್ರತ್ಯಯಸಂತತಿಃ । ಅಸಂಕೀರ್ಣಾ ಚ ಅತತ್ಪ್ರತ್ಯಯೈಃ ಶಾಸ್ತ್ರೋಕ್ತಾಲಂಬನವಿಷಯಾ ಚ ।

ಶಾಸ್ತ್ರೋಕ್ತವಾದ ವಿಧಾನವನ್ನು ಅನುಸರಿಸಿದ ಏಕಾಕಾರವಾದ ಜ್ಞಾನಧಾರೆಯು ಉಪಾಸನೆಯೆನಿಸುತ್ತದೆ. ಧ್ಯೇಯವಸ್ತುವಿನ ಹೊರತಾಗಿ ಇನ್ನೊಂದು ಜ್ಞಾನವು ಆ ಜ್ಞಾನಧಾರೆಯಲ್ಲಿ ಸೇರಬಾರದು ಮತ್ತು ಧ್ಯೇಯವಾದ ಆಲಂಬನವು ಶಾಸ್ತ್ರವಿಹಿತವಾಗಿ ಇರಬೇಕು.

(ತೈ.ಭಾ.೧.೩)

ಸರ್ವೇಷಾಂ ಚಾಧಿಕಾರೋ ವಿದ್ಯಾಯಾಮ್ । ಪರಂ ಚ ಶ್ರೇಯಃ ಕೇವಲಾಯಾ ವಿದ್ಯಾಯಾ ಏವ ಇತಿ ಸಿದ್ಧಮ್ ।

ವಿದ್ಯೆಯಲ್ಲಿ ಸರ್ವರಿಗೂ ಅಧಿಕಾರವಿದೆ. ಪರಮಶ್ರೇಯಸ್ಸಾದ ಮೋಕ್ಷವಾದರೋ ಕೇವಲ ವಿದ್ಯೆಯಿಂದಲೇ ದೊರಕುತ್ತದೆ ಎಂದು ನಿರ್ಣಯ.

(ತೈ.ಭಾ.೧.೧೧)

ಅಸ್ತಿ ತದ್ ಬ್ರಹ್ಮ ಯದರ್ಥಾಃ ಕಾರ್ಯ ಕರಣ ಪ್ರಾಣನಾದಿ ಚೇಷ್ಟಾಃ; ತತ್ಕೃತ ಏವ ಚ ಆನಂದೋ ಲೋಕಸ್ಯ ।

ಬ್ರಹ್ಮವೆಂಬ ವಸ್ತು ಇದೆ. ಅದಕ್ಕಾಗಿಯೇ ಇಂದ್ರಿಯಗಳು ಪ್ರಾಣವಾಯುಗಳು ಕೆಲಸವನ್ನು ನಡೆಸುತ್ತವೆ. ಲೋಕದಲ್ಲಿ ಜನರಿಗಾಗುವ ಆನಂದವು ಬ್ರಹ್ಮದಿಂದಲೇ ಬಂದದ್ದು.

(ತೈ.ಭಾ.೨.೭)

ಲೌಕಿಕೋಽಪ್ಯಾನಂದಃ ಬ್ರಹ್ಮಾನಂದಸ್ಯೈವ ಮಾತ್ರಾ ।

ಲೋಕದಲ್ಲಿ ಜನರು ಅನುಭವಿಸುವ ಆನಂದವೂ ಬ್ರಹ್ಮಾನಂದದ ಒಂದು ಅಂಶವಾಗಿಯೇ ಇದೆ.

(ತೈ.ಭಾ.೨.೮)